# ಮುನ್ನುಡಿ

ಈ ಪ್ರಚಾರಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಹತ್ತೊಂಬತ್ತು ವರ್ಷಗಳಾಗಿವೆ. ಈ ಅವಧಿಯಲ್ಲಿ ೬೬ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರುಹೊತ್ತಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೊ ತ್ರಿಗುಣವೊ ಆಗಿರಬೇಕಾಗಿ ತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನೂ ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ. ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. "ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ? ಮುಗಿದುಹೋಗಿರುವ ಪುಸ್ತಿಕೆ ಗಳು ಅಚ್ಚಾಗಿವೆಯೆ?" ಎಂದು ಮೇಲಿಂದ ಮೇಲೆ ಜನ ಕೇಳು ತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ; ನಾಡಿನ ಪ್ರಗತಿಯ ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿ ಗಾಗಿ ಸಾಧನವೇ ಹೊರತು ಅದೇ ಪರಮಗುರಿಯಲ್ಲ; ಜ್ಞಾನ ಸಂಪಾದನೆಯೇ ಅದರ ಪರಮಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯ ದಂಥ ಸಂಸ್ಥೆಗಳ ಆದ್ಯಕರ್ತವ್ಯ. ಈ ಮೂಲಕ ವಿಶ್ವವಿದ್ಯಾನಿಲ

ಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗಳಲ್ಲಿ ಹರಿದು, ಸಮಷ್ಟಿ ಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೆ ಕನ್ನಡ ದಲ್ಲಿ ವಿಜ್ಞಾನಸಂಬಂಧವಾದ ವಿಷಯಗಳನ್ನು ಸುಲಭವಾಗಿ ಸರಳ ವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕಭಾಷೆಯಾಗ ಬಲ್ಲುದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗಿದೆ. ಈ ಪುಸ್ತಿಕೆ ಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಕೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯ ಮೂಡದಿರದು. ಇವುಗಳಲ್ಲಿ ೪೨ ಪುಸ್ತಿಕೆಗಳು ಭೌತ ವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ಸಮಾಜವಿಜ್ಞಾನ, ವೈದ್ಯವಿಜ್ಞಾನ ಗಣಿತ ವಿಜ್ಞಾನ, ಇತಿಹಾಸ ಮೊದಲಾದುವುಗಳಿಗೆ ಸಂಬಂಧಿ ಸಿದುವು. ಉಳಿದ ೨೩ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ-ವಿಮರ್ಶೆಗೆ ಸಂಬಂಧಿಸಿದುವು. ಇವುಗಳ ಗ್ರಂಥಕರ್ತರು ಪ್ರಮುಖ ವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನ ವಿದ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ, ವಿಶ್ವವಿದ್ಯಾನಿಲಯ ದಲ್ಲಿ ಶಿಕ್ಷಣಮಾಧ್ಯಮವಾಗುವ ಶಕ್ತಿಯನ್ನು ಪಡೆದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರಗೊಂಡು ಪುಸ್ತಿಕೆಗಳ ಸಂಖ್ಯೆ ದಿನೇ ದಿನೇ ಬೆಳೆಯಬೇಕೆಂಬುದೂ, ಇದ ರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳ

ಬೇಕೆಂಬುದೂ ವಿಶ್ವವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶಕಮುಹೂರ್ತದಲ್ಲಿ ಕನ್ನಡನುಡಿ ಆಡಳಿತದ ಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ ಜನತೆಯ ಸಂಸ್ಕೃತಿವಿಕಾಸಸಾಧನದ ಭಾಷೆಯಾಗಿ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಸೇವೆಯನ್ನು ಕರ್ಣಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು
೬-೫-೧೯೫೭

ಕೆ. ವಿ. ಪುಟ್ಟಪ್ಪ
ವೈಸ್-ಛಾನ್ಸಲರ್

# ಅರಿಕೆ

ನಾನು ಭದ್ರಾವತಿಯಲ್ಲಿ ಮಾಡಿದ ಪ್ರಚಾರೋಪನ್ಯಾಸವೇ ಇದೀಗ ಪುಸ್ತಕರೂಪದಲ್ಲಿ ಹೊರಬಂದಿದೆ.

ಈ ಚಿಕ್ಕಪುಸ್ತಕದಲ್ಲಿ ಕೆಲವು ಮುಖ್ಯವಾದ ಚುನಾವಣಾ ತತ್ತ್ವಗಳನ್ನು ಪ್ರಸ್ತಾಪಿಸಿರುತ್ತೇನೆ. ನಮ್ಮ ದೇಶದ ಚುನಾವಣೆಗಳನ್ನು ಗಮನದಲ್ಲಿರಿಸಿಕೊಂಡು ಇದನ್ನು ಬರೆಯಲಾಗಿದೆ. ಓದುಗರಿಗೆ ಇದು ಉಪಯುಕ್ತವಾಗುವುದೆಂಬ ವಿಶ್ವಾಸ ನನಗಿದೆ.

ಈ ಪುಸ್ತಕವನ್ನು ಪ್ರಕಟಿಸಲು ಮುಂದೆ ಬಂದ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ನನ್ನ ವಂದನೆಗಳನ್ನರ್ಪಿಸುತ್ತೇನೆ.

೨-೫-೧೯೫೭ **ಗ. ಸ. ಹಾಲಪ್ಪ**

# ವಿಷಯಾನುಕ್ರಮಣಿಕೆ

# ಚುನಾವಣೆಗಳು

## ೧

## ಚುನಾವಣೆಗಳ ಮಹತ್ವ

ಬಯಲಾಟ, ಕೋಲಾಟ, ರಥೋತ್ಸವ ಮುಂತಾದುವು ನಮ್ಮ ಜನರಿಗೆ ಹೊಸವೇನೂ ಅಲ್ಲ. ಇವು ನಮ್ಮ ಸಾಮಾಜಿಕ ಉತ್ಸವಗಳು. ಸಡಗರದಿಂದ ಇವುಗಳಲ್ಲಿ ನಾವೆಲ್ಲರೂ ಭಾಗವಹಿಸುತ್ತೇವೆ. ಚುನಾವಣೆಗಳೂ ಕೂಡ ಒಂದು ರೀತಿಯ ರಾಷ್ಟ್ರೀಯ ಉತ್ಸವಗಳೆನ್ನಬಹುದು. ಪ್ರಜಾಪ್ರಭುತ್ವವೆಂಬ ಪ್ರಯೋಗದ ಪ್ರಥಮ ಅಂಕ ಚುನಾವಣೆಗಳು. ಬಯಲಾಟದಲ್ಲಿ ಕೆಲವರು ಮಾತ್ರ ಪಾತ್ರವಹಿಸುತ್ತಾರೆ. ಬಹುಜನರು ಪ್ರೇಕ್ಷಕರಾಗಿ ಭಾಗವಹಿಸುತ್ತಾರೆ. ಚುನಾವಣೆಗಳಲ್ಲಿಯೂ ಕೂಡ ಮುಖ್ಯಪಾತ್ರಧಾರಿಗಳು ಸ್ಪರ್ಧಿಗಳು ಮತ್ತು ಮತದಾರರು. ಚುನಾವಣೆ ನಡೆಯಬೇಕಾದರೆ ಇಬ್ಬರೂ ಇರಬೇಕು. ಬರೀ ಸ್ಪರ್ಧಿಗಳಾಗಲೀ ಬರೀ ಮತದಾರರಾಗಲೀ ಇದ್ದರೆ ಚುನಾವಣೆಯು ನಡೆಯುವುದಿಲ್ಲ. ಇಲ್ಲಿ ಕೂಡ ಮತದಾರರಲ್ಲದ ಸಹಸ್ರಾರು ಜನರು ಪ್ರೇಕ್ಷಕರಾಗಿ ಚುನಾವಣೆಗಳ ಸಂಭ್ರಮವನ್ನು ವೀಕ್ಷಿಸಬಹುದು.

ಪ್ರಜಾಪ್ರಭುತ್ವದಲ್ಲಿ ಚುನಾವಣೆಗಳ ಪಾತ್ರ ಮುಖ್ಯವಾದುದು. ಚುನಾವಣೆಗಳೇ ಪ್ರಜಾಪ್ರಭುತ್ವದ ಜೀವಾಳ. ಚುನಾವಣೆಯಿಲ್ಲದ ಪ್ರಜಾಪ್ರಭುತ್ವವೇ ಇಲ್ಲ. ಚುನಾವಣೆಗಳಿಂದಲೇ ಪ್ರಜಾಪ್ರಭುತ್ವದ ತೇರು ಮುಂದುವರಿಯಬೇಕು. ಚುನಾವಣೆಗಳು ಪ್ರಜಾಪ್ರಭುತ್ವದ ತೊಲೆಗಂಬಗಳಿದ್ದಂತೆ. ಇವುಗಳ ಆಧಾ

ರದ ಮೇಲೆ ಶಾಸನಸಭೆಯ ಕಟ್ಟಡ ರೂಪುಗೊಳ್ಳಬೇಕು ; ಮಂತ್ರಿ ಮಂಡಲದ ಗೋಪುರ ಏಳಬೇಕು.

ಚುನಾವಣೆಯೆಂದರೆ ಪ್ರತಿನಿಧಿಗಳನ್ನು ಆರಿಸುವುದು ಎಂದರ್ಥ. ಚುನಾವಣೆ ಎಂಬ ಪದವು 'ಚುನಾವ್' ಎಂಬ ಹಿಂದಿ ಪದದಿಂದ ಉದ್ಭವವಾಗಿದೆ. ಚುನಾವ್ ಎಂದರೆ ತಮಗೆ ಬೇಕಾದವರನು ಆಯ್ಕೆಮಾಡುವುದು. ಇಂಗ್ಲೀಷಿನಲ್ಲಿ ಇದನ್ನು ಇಲೆಕ್ಷನ್ ಎನ್ನುತ್ತಾರೆ. ಚುನಾವ್ ಎಂಬ ಪದಕ್ಕೆ ಇಲೆಕ್ಟ್ (Elect) ಎಂಬುದು ಸಮಾನ ಪದ. ಇಂಗ್ಲೀಷಿನಲ್ಲಿ ಸೆಲೆಕ್ಟ್ (Select) ಎಂದರೆ ಬೇರೆ ಅರ್ಥ. ಸೆಲೆಕ್ಷನ್‌ನಲ್ಲಿ ಓಟುಮಾಡುವ ಪ್ರಶ್ನೆ ಇಲ್ಲ. ಓಟುಗಳ ಮೂಲಕ ಪ್ರತಿನಿಧಿಗಳನ್ನು ಅಥವ ಸ್ಪರ್ಧಿಗಳನ್ನು ಆರಿಸುವ ಕ್ರಮವನ್ನು ಇಲೆಕ್ಷನ್ ಅಥವ ಚುನಾವಣೆಗಳು ಎಂದು ಕರೆಯಬಹುದು. ಒಂದು ಪ್ರದೇಶಕ್ಕೆ ಅಥವ ಗುಂಪಿಗೆ ಪ್ರಾತಿನಿಧ್ಯ ದೊರಕಿಸುವುದೇ ಚುನಾವಣೆಯ ಉದ್ದೇಶ.

ಚುನಾವಣೆಗಳು ಎಲ್ಲಿಗೆ ಬೇಕಾದರೂ ಆಗಬಹುದು. ಪಂಚಾಯಿತಿ, ಪೌರಸಭೆ ಮತ್ತು ಜಿಲ್ಲಾ ಬೋರ್ಡುಗಳು ಮೊದಲಾದ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಯುತ್ತದೆ. ರಾಜ್ಯ ಅಥವಾ ಪ್ರಾಂತ ಶಾಸನಸಭೆಗಳಿಗೆ ಚುನಾವಣೆ ನಡೆಯಬಹುದು. ಸಮಗ್ರ ರಾಷ್ಟ್ರದ ಪ್ರತಿನಿಧಿಸಭೆಯಾದ ಪಾರ್ಲಿಮೆಂಟಿಗೆ ಚುನಾವಣೆ ನಡೆದು ಪ್ರತಿನಿಧಿಗಳನ್ನು ಜನರು ಆರಿಸಬಹುದು. ಯಾವ ಸಂಸ್ಥೆಯ ಸದಸ್ಯಸ್ಥಾನಕ್ಕೇ ಆಗಲಿ ಇರುವ ಸ್ಥಾನಕ್ಕಿಂತಲೂ ಹೆಚ್ಚಿನ ಸ್ಪರ್ಧಿಗಳಿದ್ದರೆ ಚುನಾವಣೆ ನಡೆಯಬೇಕಾಗುವುದು. ಸಾಮಾನ್ಯವಾಗಿ ಒಂದು ಸ್ಥಾನಕ್ಕೆ ಅನೇಕರು ಸ್ಪರ್ಧಿಸುತ್ತಾರೆ. ಯಾರು ಬಹುಮತ ಗಳಿಸುತ್ತಾರೋ ಅವರು ಚುನಾಯಿತರಾಗುತ್ತಾರೆ. ಸ್ಪರ್ಧಿಗಳು ಚುನಾಯಿತರಾಗುವುದೂ ಬಿಡುವುದೂ

ಮತದಾರರನ್ನವಲಂಬಿಸಿದೆ.

ರಾಜಕೀಯ ಸಂಸ್ಥೆಗಳಿಗೆ ನಡೆಯುವ ಚುನಾವಣೆಗಳನ್ನು ಸ್ಥಳೀಯ ಸಂಸ್ಥೆಗಳಿಗೆ ನಡೆಯುವ ಚುನಾವಣೆಗಳು ಮತ್ತು ಸಾರ್ವತ್ರಿಕ ಚುನಾವಣೆಗಳೆಂದು ಎರಡು ವಿಧವಾಗಿ ವಿಂಗಡಿಸ ಬಹುದು. ಗ್ರಾಮಪಂಚಾಯ್ತಿ, ಪೌರಸಭೆ ಮತ್ತು ಜಿಲ್ಲಾ ಮಂಡಲಿಗಳು ಪ್ರಜಾಪ್ರಭುತ್ವದ ತಾಯಿಬೇರುಗಳಿದ್ದಂತೆ. ಪ್ರಜಾಪ್ರಭುತ್ವದ ಪ್ರಾಥಮಿಕ ಶಿಕ್ಷಣ ಸ್ಥಳೀಯಸಂಸ್ಥೆಗಳ ಚುನಾವಣೆಗಳ ಮೂಲಕ ದೊರಕುತ್ತದೆ. ಪ್ರತಿಯೊಂದು ರಾಜ್ಯದ ಶಾಸನ ಸಭೆಯು ಕಾನೂನು ಮೂಲಕ ಸ್ಥಳೀಯ ಸಂಸ್ಥೆಗಳ ಚುನಾವಣಾ ರೀತಿಯನ್ನೂ ಸ್ಪರ್ಧಿಗಳ ಮತ್ತು ಮತದಾರರ ಅರ್ಹತೆಗಳನ್ನೂ ನಿರ್ಧರಿಸುತ್ತದೆ. ಸ್ಥಳೀಯ ಸಂಸ್ಥೆಗಳನ್ನು ಚುನಾಯಿಸುವ ಪದ್ಧತಿ ಎಲ್ಲ ರಾಜ್ಯಗಳಲ್ಲಿ ಒಂದೇ ರೀತಿಯ ದಾಗಿಲ್ಲ. ವಿಶಾಲ ಮೈಸೂರು ರಾಜ್ಯದಲ್ಲಿ ಸ ಳೀಯಸಂಸ್ಥೆಗಳನ್ನು ರಚಿಸುವ ಕ್ರಮ ಭಿನ್ನವಾಗಿದೆ. ಐದು ಭಿನ್ನ ಪದ್ಧತಿಗಳನ್ನು ಏಕರೂಪಕ್ಕೆ ತರಬೇಕಾಗಿದೆ. ರಾಜ್ಯದ ಎಲ್ಲ ಭಾಗಗಳಿಗೂ ಒಂದೇ ಪದ್ಧತಿ ಏರ್ಪಾಡಾಗಬೇಕು. ಸಾಮಾನ್ಯವಾಗಿ ಗ್ರಾಮ ಪಂಚಾಯ್ತಿ, ಪೌರಸಭೆ ಮತ್ತು ಜಿಲ್ಲಾ ಮಂಡಲಿಗಳ ಸದಸ್ಯರನ್ನು ಆಯಾ ಕ್ಷೇತ್ರದ ವಯಸ್ಕರುಗಳು ಚುನಾಯಿಸುತ್ತಾರೆ. ಸದಸ್ಯರು ಗಳು ಅಧ್ಯಕ್ಷರನ್ನು ಆರಿಸಿಕೊಳ್ಳುತ್ತಾರೆ. ಗ್ರಾಮಪಂಚಾಯ್ತಿ ಅಧ್ಯಕ್ಷನು ಗ್ರಾಮದ ಮುಂದಾಳು. ಪಟ್ಟಣಗಳಲ್ಲಿ ಪೌರಸಭಾ ಧ್ಯಕ್ಷರೂ ನಗರಗಳಲ್ಲಿ ನಗರಾಧ್ಯಕ್ಷರೂ ನಾಗರಿಕರ ಮುಖಂಡ ರೆನಿಸಿಕೊಂಡು ಸಾರ್ವಜನಿಕ ಸೇವೆಮಾಡುತ್ತಾರೆ. ಜಿಲ್ಲಾಮಂಡ ಲಿಯ ಅಧ್ಯಕ್ಷರುಗಳು ಗ್ರಾಮಾಂತರ ಪ್ರದೇಶಗಳ ಪ್ರತಿನಿಧಿಗ ಳಾಗಿ ಕೆಲಸಮಾಡುತ್ತಾರೆ. ಇವರೆಲ್ಲರೂ ಚುನಾಯಿತ ವ್ಯಕ್ತಿಗಳು.

ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತರಾಗಿ ಕೆಲಸಮಾಡುವವರು ಮುಂದೆ ಶಾಸನಸಭೆಗಳಲ್ಲೂ ಮಂತ್ರಿಮಂಡಲಗಳಲ್ಲೂ ನಾಯಕರಾಗಿ ಪ್ರಸಿದ್ಧಿಗೆ ಬರುವುದುಂಟು.

ಚುನಾವಣೆಗಳು ಕೇವಲ ಸ್ಥಳೀಯಸಂಸ್ಥೆಗಳಿಗೆ ಮಾತ್ರ ನಡೆಯುತ್ತವೆಂದು ಭಾವಿಸಬಾರದು. ಸಹಕಾರಸಂಸ್ಥೆಗಳು, ವಿಶ್ವವಿದ್ಯಾನಿಲಯಸಂಸ್ಥೆಗಳು ಮೊದಲಾದ ಖಾಸಗೀ ಅಥವಾ ಸರ್ಕಾರೀ ಸಂಸ್ಥೆಗಳ ರಚನೆ ಕೂಡ ಚುನಾವಣೆಯ ಆಧಾರದ ಮೇಲೆ ಆಗಬಹುದು. ನೀವು ಸಹಕಾರಿಗಳಾಗಿದ್ದರೆ ನಿಮ್ಮ ಸ್ಥಳದ ಸಹಕಾರಸಂಸ್ಥೆಗಳ ಚುನಾವಣೆಗಳಲ್ಲಿ ಭಾಗವಹಿಸಬಹುದು. ವಿಶ್ವವಿದ್ಯಾನಿಲಯದ ಅಂಗಸಂಸ್ಥೆಗಳಾದ ಸೆನೆಟ್ ಮತ್ತು ಸಿಂಡಿಕೇಟುಗಳಿಗೆ ಚುನಾವಣೆ ನಡೆಯುತ್ತದೆ. ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಉಪಕುಲಪತಿಯನ್ನು ಸೆನೆಟ್ ಸದಸ್ಯರು ಚುನಾಯಿಸಿಕೊಳ್ಳುತ್ತಾರೆ. ಸೆನೆಟ್ಟಿಗೆ ಅನೇಕ ಕ್ಷೇತ್ರಗಳಿಂದ ಚುನಾವಣೆ ನಡೆಯುತ್ತದೆ. ರಿಜಿಸ್ಟರ್ಡ್ ಪದವೀಧರರು, ಉಪಾಧ್ಯಾಯರು, ಮತ್ತು ಇತರರು ಸೆನೆಟ್ಟಿಗೆ ತಮ್ಮ ಪ್ರತಿನಿಧಿಗಳನ್ನು ಚುನಾಯಿಸಬಹುದು. ಆದರೆ ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಕವರ್ಗಗಳಲ್ಲಿ ಚುನಾವಣೆಗಳು ಆದಷ್ಟು ಕಡಿಮೆ ಇರಬೇಕೆಂಬ ಒಂದು ಅಭಿಪ್ರಾಯವಿದೆ. ಪ್ರಜಾಪ್ರಭುತ್ವದ ಯುಗದಲ್ಲಿ ಚುನಾವಣೆಗಳು ಎಲ್ಲ ಸಂಸ್ಥೆಗಳಿಗೂ ನಡೆಯುವುದು ವಾಡಿಕೆಯಾಗಿಬಿಟ್ಟಿದೆ. ವಿದ್ಯಾರ್ಥಿಸಂಘಗಳು, ಕಾರ್ಮಿಕಸಂಘಗಳು ತಮ್ಮ ತಮ್ಮ ಪ್ರತಿನಿಧಿಗಳನ್ನು ಚುನಾಯಿಸಿಕೊಳ್ಳುತ್ತಾರೆ. ಆದ್ದರಿಂದ ಚುನಾವಣೆಗಳು ಸರ್ವವ್ಯಾಪಿಯಾಗಿವೆ ಎನ್ನಲಡ್ಡಿಯಿಲ್ಲ.

ಚುನಾವಣಾಪದ್ಧತಿಗಳು ಹಲವಾರು. ಮತದಾರರ ಕ್ಷೇತ್ರಗಳ ರಚನೆಯನ್ನು ಅನೇಕ ರೀತಿಯಲ್ಲಿ ಮಾಡಬಹುದು. ಸಾರ್ವತ್ರಿಕ

ಚುನಾವಣೆಗಳು ಹೇಗೆ ನಡೆಯಬೇಕೆಂಬುದನ್ನು ದೇಶದ ಪ್ರತಿನಿಧಿಗಳು ನಿರ್ಧರಿಸಿಕೊಳ್ಳಬೇಕು. ಚುನಾವಣೆಗಳಲ್ಲಿ ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಒಂದು ಮತವನ್ನು ಕೊಡುವುದು ಸಂಪ್ರದಾಯವಾಗಿದೆ. ಆದರೆ ಒಬ್ಬ ವ್ಯಕ್ತಿ ಅನೇಕ ಮತಗಳನ್ನು ಕೊಡಲೂ ಅವಕಾಶವಿದೆ. ವಿಧಾನ ಪರಿಷತ್ತಿಗೆ ಪದವೀಧರರು ಮತ್ತು ಉಪಾಧ್ಯಾಯರು ತಮ್ಮ ಪ್ರತಿನಿಧಿಗಳನ್ನು ಚುನಾಯಿಸಿಕೊಳ್ಳುವ ಹಕ್ಕಿದೆ. ಪ್ರಮಾಣಬದ್ಧ ಮತದಾನ ಪದ್ಧತಿಯ ಪ್ರಕಾರ ಪದವೀಧರರ ಮತ್ತು ಉಪಾಧ್ಯಾಯರ ಚುನಾವಣಾಕ್ಷೇತ್ರಗಳು ತಮ್ಮ ಪ್ರತಿನಿಧಿಗಳನ್ನು ಆರಿಸುತ್ತವೆ. ಚುನಾವಣಾಪದ್ಧತಿಗಳೆಲ್ಲವನ್ನೂ ವಿವರಿಸಲು ಇಲ್ಲಿ ಸ್ಥಳಾವಕಾಶವಿಲ್ಲ. ಸಾರ್ವತ್ರಿಕ ಚುನಾವಣೆಯ ವಿಷಯವನ್ನು ಅರಿಯೋಣ.

ಭಾರತದಲ್ಲಿ ಐದು ವರ್ಷಗಳಿಗೊಮ್ಮೆ ಸಾರ್ವತ್ರಿಕಚುನಾವಣೆ ನಡೆಯುತ್ತದೆ. ಅಧಿಕಾರದಲ್ಲಿರುವ ಮಂತ್ರಿಮಂಡಲವನ್ನು ಅಥವಾ ರಾಜಕೀಯ ಪಕ್ಷವನ್ನು ಉರುಳಿಸಲು ಅಥವಾ ಮತ್ತೆ ಅಧಿಕಾರ ಗದ್ದುಗೆಗೇರಿಸಲು ಸಾರ್ವತ್ರಿಕಚುನಾವಣೆಯು ಒಂದು ಸಾಧನ. ಚುನಾವಣೆಗಳ ಮೂಲಕ ಸರ್ಕಾರವನ್ನು ಬದಲಾಯಿಸಲು ಮತದಾರರಿಗೆ ಹಕ್ಕಿದೆ. ಯಾವ ರಾಜಕೀಯ ಪಕ್ಷದ ಸ್ಪರ್ಧಿಗಳು ಶಾಸನ ಸಭೆಯಲ್ಲಿ ಬಹುಮತ ಸ್ಥಾನಗಳನ್ನು ಪಡೆಯುವರೋ ಆ ಪಕ್ಷವು ಮಂತ್ರಿಮಂಡಲವನ್ನು ರಚಿಸಿ ಅಧಿಕಾರವನ್ನು ನಡೆಸಬೇಕಾಗುತ್ತದೆ. ಬಹುಮತಪಕ್ಷವು ಯಾರನ್ನು ತನ್ನ ನಾಯಕನೆಂದು ಚುನಾಯಿಸುತ್ತದೋ ಆ ವ್ಯಕ್ತಿ ಸರ್ಕಾರದ ಪ್ರಧಾನ ಮಂತ್ರಿಯಾಗುತ್ತಾನೆ. ಆದುದರಿಂದ ಚುನಾವಣೆಗಳಿಗೆ ಪ್ರಜಾಪ್ರಭುತ್ವದಲ್ಲಿ ಬಹಳ ಪ್ರಾಮುಖ್ಯತೆಯಿದೆ. ಮತದಾರರು ಚುನಾವಣೆಯ ಕಾಲದಲ್ಲಿ ಸರ್ಕಾರವನ್ನೂ ಶಾಸನಸಭಾ ಸದಸ್ಯರನ್ನೂ

ತಮಗೆ ಇಷ್ಟವಿಲ್ಲದಿದ್ದರೆ ತಿರಸ್ಕರಿಸಬಹುದು. ಇಷ್ಟವಿದ್ದರೆ ಅಧಿಕಾರದಲ್ಲಿರುವ ಸರ್ಕಾರವನ್ನೇ ಮುಂದುವರಿಸಬಹುದು. ಸರ್ಕಾರದ ಏಳೂ, ಬೀಳೂ ಮತದಾರರ ಮತಚೀಟಿಯ ಒಲವನ್ನವಲಂಬಿಸಿದೆ.

ಜನರು ತಮ್ಮ ಮತವನ್ನು ಸ್ವತಂತ್ರವಾಗಿಯೂ ನ್ಯಾಯವಾಗಿಯೂ ಚಲಾಯಿಸಬೇಕು. ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ಜನರು ನಿರ್ಭಯವಾಗಿ ತಮ್ಮ ಪ್ರತಿನಿಧಿಗಳನ್ನು ಚುನಾಯಿಸಬೇಕು. ಜಾತಿ, ವಂಶ, ರೊಕ್ಕ ಮುಂತಾದ ಪ್ರಭಾವಗಳಿಗೀಡಾಗದೆ ನಾಗರಿಕರು ನಿಷ್ಪಕ್ಷವಾಗಿ ವರ್ತಿಸಬೇಕು. ಸರ್ಕಾರವು ಚುನಾವಣೆಗಳಲ್ಲಿ ಚಂಚುಪ್ರವೇಶ ಮಾಡಬಾರದು. ಮತದಾರನು ಯಾರ ಮತ್ತು ಯಾವ ಹಂಗಿಗೊಳಗಾಗದೆ ಸ್ವತಂತ್ರವಾಗಿ ಮತದಾನ ಮಾಡುವುದು ಅತ್ಯಾವಶ್ಯಕ. ಈ ದೃಷ್ಟಿಯಿಂದ ಭಾರತಸಂವಿಧಾನವು ಎಚ್ಚರಿಕೆ ವಹಿಸಿದೆ.

ಚುನಾವಣೆಗಳನ್ನು ನಡೆಸುವ ಸಂಸ್ಥೆಯು ಸರ್ಕಾರದ ಪ್ರಭಾವ ಮತ್ತು ಹತೋಟಿಗೊಳಗಾಗದೆ ನ್ಯಾಯದ ದೃಷ್ಟಿಯಿಂದ ಕೆಲಸ ಮಾಡಬೇಕು ಎಂಬ ಉದ್ದೇಶದಿಂದ ನಮ್ಮ ಸಂವಿಧಾನವು ಚುನಾವಣಾ ಆಯೋಗವೆಂಬ ಸಂಸ್ಥೆಗೆ ಚುನಾವಣೆಯ ಜವಾಬ್ದಾರಿಯನ್ನು ವಹಿಸಿಕೊಟ್ಟಿದೆ. ಈ ಆಯೋಗ (Election Commission) ಸರ್ಕಾರದ ಆಜ್ಞೆಯಂತೆ ನಡೆಯದೆ ಪಕ್ಷಾತೀತವಾಗಿ ಸ್ವತಂತ್ರವಾಗಿ ನಡೆದುಕೊಳ್ಳುವುದು; ಸರ್ಕಾರದ ಕೈಗೊಂಬೆಯಾಗಿ ವರ್ತಿಸುವಂತಿಲ್ಲ. ಸರ್ಕಾರವು ಇದರ ಮೇಲೆ ಪ್ರಭಾವ ಬೀರಿ ಕೈವಾಡ ಮಾಡುವಂತಿಲ್ಲ.

ರಾಷ್ಟ್ರಪತಿಯು ಚುನಾವಣಾ ಆಯೋಗದ ಸದಸ್ಯರನು ನೇಮಕಮಾಡುತ್ತಾನೆ. ಪ್ರಧಾನ ಚುನಾವಣಾಕಮಿಷನರು

ಆಯೋಗದ ಅಧ್ಯಕ್ಷರು.ಪ್ರಾದೇಶಿಕ ಕಮಿಷನರುಗಳನ್ನು ನೇಮಿಸ ಲವಕಾಶವಿದೆ. ಸಾರ್ವತ್ರಿಕ ಚುನಾವಣೆಗೆ ಮುಂಚೆ ಪ್ರಾದೇಶಿಕ ಕಮಿಷನರುಗಳ ನೇಮಕವಾಗುತ್ತದೆ. ಚುನಾವಣಾ ಆಯೋಗದ ಮುಖ್ಯ ಕರ್ತವ್ಯಗಳಿವು: (೧) ರಾಷ್ಟ್ರಪತಿ, ಉಪರಾಷ್ಟ್ರಪತಿಗಳ ಸ್ಥಾನಗಳಿಗೆ,ಮತ್ತು ಪಾರ್ಲಿಮೆಂಟಿಗೆ ಹಾಗೂ ರಾಜ್ಯಶಾಸನ ಸಭೆ ಗಳಿಗೆ ಚುನಾವಣೆ ನಡೆಸಲು ಮತದಾರರ ಪಟ್ಟಿಯನ್ನು ತಯಾ ರಿಸುವ ಬಗ್ಗೆ ಮಾರ್ಗದರ್ಶನ ಮಾಡುವುದು. (೨) ಮೇಲ್ಕಂಡ ಸ್ಥಳಗಳಿಗೆ ಚುನಾವಣೆ ನಡೆಸುವುದು. (೩) ಚುನಾವಣಾ ವಿವಾದಗಳನ್ನು ಬಗೆಹರಿಸಿ ತೀರ್ಪುಕೊಡಲು ಚುನಾವಣಾ ಪಂಚಾಯ್ತಿಗಳನ್ನು ನೇಮಿಸುವುದು.

ಚುನಾವಣಾ ಕಮಿಷನ್ನಿನ ಜವಾಬ್ದಾರಿ ಬಹಳ ಗುರುತರವಾ ದದ್ದು. ಚುನಾವಣೆಗಳನ್ನು ನಿಷ್ಪಕ್ಷಪಾತವಾಗಿ ನಡೆಸುವ ಹೊಣೆ ಅದಕ್ಕೆ ಸೇರಿದೆ. ಚುನಾವಣೆಗಳ ಬಗ್ಗೆ ಸಂದೇಹಗಳು ತಲೆದೋರಿ ದರೆ ಮತ್ತು ಚುನಾವಣೆಗಳ ನ್ಯಾಯಬದ್ಧತೆಯು ಪ್ರಶ್ನಿಸಲ್ಪಟ್ಟರೆ ಅವುಗಳನ್ನು ಬಗೆಹರಿಸುವುದು ಚುನಾವಣಾಕಮಿಷನ್ನಿನ ಕರ್ತವ್ಯ. ಈ ಕರ್ತವ್ಯವನ್ನು ನಿರ್ಭಯವಾಗಿ ಮತ್ತು ನಿರಾತಂಕವಾಗಿ ನಿರ್ವ ಹಿಸಬೇಕೆಂದು ಕಮಿಷನ್ನಿಗೆ ಸ್ವತಂತ್ರಸ್ಥಾನವನ್ನು ಏರ್ಪಡಿಸಲಾ ಗಿದೆ. ಕಮಿಷನ್ನು ಸರಕಾರದ ಅಧೀನ ಸಂಸ್ಥೆಯಾಗಿ ವರ್ತಿಸು ವಂತಿಲ್ಲ. ಮುಖ್ಯ ಚುನಾವಣಾಧಿಕಾರಿಯನ್ನು ಸುಲಭವಾಗಿ ಪದ ಚ್ಯುತಗೊಳಿಸುವಂತಿಲ್ಲ. ಸುಪ್ರೀಂ ಕೋರ್ಟಿನ ನ್ಯಾಯಾಧೀಶ ರನ್ನು ತೆಗೆಯಲು ಅನುಸರಿಸುವ ಮಾರ್ಗವನ್ನು ಇವರನ್ನು ಪದ ಚ್ಯುತಗೊಳಿಸುವ ಕಾಲದಲ್ಲಿಯೂ ಆಚರಿಸಬೇಕು. ಇವರ ಅಧಿ ಕಾರಾವಧಿ ಮುಂತಾದವುಗಳ ವಿಷಯದಲ್ಲಿ ಪಾರ್ಲಿಮೆಂಟು ವಿಧಿ ಗಳನ್ನು ರಚಿಸಬಹುದು. ಈ ವಿಧಿಗಳಿಗೆ ವಿರೋಧವಾಗದಂತೆ

ರಾಷ್ಟ್ರಪತಿಯು ಇವರ ಸೇವೆಯ ನಿಯಮಗಳನ್ನು ನಿರ್ಧರಿಸಬಹುದು. ಆದರೆ ಇಂತಹ ನಿರ್ಧಾರಗಳಿಂದ ಇವರು ನೇಮಕವಾದಾಗ ಇದ್ದ ಸವಲತ್ತುಗಳಿಗೆ ಸಂಚಕಾರ ಬರಕೂಡದು. ರಾಜ್ಯಗಳಲ್ಲಿ ಪ್ರಾದೇಶಿಕ ಕಮಿಷನರುಗಳು ರಾಜ್ಯಪಾಲರ ಆಜ್ಞೆಯ ಪ್ರಕಾರ ನಡೆದುಕೊಳ್ಳಬೇಕು. ಈ ರೀತಿಯಲ್ಲಿ ಚುನಾವಣಾ ಕಮಿಷನ್ನಿನ ಸ್ವಾತಂತ್ರ್ಯವನ್ನು ಕಾಪಾಡಲಾಗಿದೆ. ಇದರ ಸದಸ್ಯರ ಸಂಬಳಸಾರಿಗೆಗಳನ್ನು ಸಂಚಿತನಿಧಿಯಿಂದ ಕೊಡಲಾಗುತ್ತದೆ. ಎಂದರೆ ಪಾರ್ಲಿಮೆಂಟು ಇವರ ಸಂಬಳ ಸಾರಿಗೆಗಳ ಬಗ್ಗೆ ಮತದಾನ ಮಾಡುವಂತಿಲ್ಲ.

ಚುನಾವಣೆಗಳು ನಿಷ್ಪಕ್ಷಪಾತ ವಾತಾವರಣದಲ್ಲಿ ನಡೆಯಬೇಕೆಂಬ ಸದುದ್ದೇಶದಿಂದ ಸಂವಿಧಾನಕರ್ತರು ಮೇಲ್ಕಂಡ ಏರ್ಪಾಟುಗಳನ್ನು ಮಾಡಿರುತ್ತಾರೆ. ಉತ್ತಮ ಪ್ರತಿನಿಧಿಗಳನ್ನು ಜನತೆಯು ಆರಿಸಲೆಂದು ಸಂವಿಧಾನದಲ್ಲಿ ಸ್ವತಂತ್ರವಾದ ಚುನಾವಣಾ ಆಯೋಗದ ವ್ಯವಸ್ಥೆಯನ್ನು ಮಾಡಲಾಗಿದೆ. ಪ್ರಜಾಪ್ರಭುತ್ವವು ಸುಗಮವಾಗಿ ನಡೆಯಲು ಇಂತಹ ಕ್ರಮ ಅತ್ಯಗತ್ಯವಾಗಿದೆ.

---



## ವಯಸ್ಕರಿಗೆ ಮತದ ಹಕ್ಕು

೧೯೫೧-೫೨ ರ ಮಹಾಚುನಾವಣೆಗೆ ಮುನ್ನ ಭಾರತದಲ್ಲಿ ೧೭ ಕೋಟಿ ೬೦ ಲಕ್ಷ ಮತದಾರರು ಓಟಿನ ಹಕ್ಕನ್ನು ಪಡೆದಿದ್ದರು.

೧೯೫೭ ರ ಮಹಾಚುನಾವಣೆಯ ಕಾಲಕ್ಕೆ ಮತದಾರರ ಸಂಖ್ಯೆ ಇನ್ನೂ ಹೆಚ್ಚಿ ಸುಮಾರು ೨೦ ಕೋಟಿಯನ್ನು ಮುಟ್ಟಿತು. ಪ್ರಪಂಚದ ಇನ್ನಾವ ಪ್ರಜಾಪ್ರಭುತ್ವದಲ್ಲಿಯೂ ಇಷ್ಟು ಅಧಿಕ ಸಂಖ್ಯೆಯ ಮತದಾರರಿಲ್ಲ.

ಸ್ವಾತಂತ್ರ್ಯಪೂರ್ವದಲ್ಲಿ ಎಲ್ಲರಿಗೂ ಓಟಿನ ಹಕ್ಕಿರಲಿಲ್ಲ. ಬ್ರಿಟಿಷರ ಆಳ್ವಿಕೆಯಲ್ಲಿ ಅನೇಕ ವರ್ಷಗಳ ದೀರ್ಘಕಾಲದವರೆಗೆ ಚುನಾವಣೆಗಳೇ ಇರಲಿಲ್ಲ. ಇಂಗ್ಲಿಷರು ಪ್ರಭುತ್ವ ನಡೆಸುತ್ತಿದ್ದರು. ಭಾರತೀಯರು ಎಚ್ಚತ್ತು ಹೋರಾಟಮಾಡಿದ ಫಲವಾಗಿ ಚುನಾವಣಾ ತತ್ವವನ್ನು ಸರ್ಕಾರವು ಅಂಗೀಕರಿಸಿತು. ಶಾಸನಸಭೆಗಳಿಗೆ ಪ್ರತಿನಿಧಿಗಳನ್ನು ಚುನಾಯಿಸಿ ಕಳುಹಿಸುವ ಹಕ್ಕನ್ನು ಕೊಟ್ಟರೂ ಕೇವಲ ಕೆಲವರಿಗೆ ಓಟಿನ ಹಕ್ಕು ಲಭಿಸಿತು. ೧೯೧೯ ರ ಮಾಂಟೆಗೋಚೆಲ್ಮ್ಸ್‌ಫರ್ಡ್ ಸುಧಾರಣೆಗಳಿಗೆ ಮುನ್ನ ಶಾಸನಸಭೆಗಳಿಗೆ (ಮಹಮ್ಮದಿಯರು ಮತ್ತು ಭೂಮಾಲಿಕರನ್ನುಳಿದು) ನೇರವಾದ ಚುನಾವಣೆಗಳಿರಲಿಲ್ಲ. ಚುನಾವಣೆಗಿಂತ ನಾಮಕರಣಕ್ಕೆ ಪ್ರಾಶಸ್ತ್ಯವಿತ್ತು. ೧೯೧೯ ರ ಸುಧಾರಣೆಯ ತರುವಾಯ ವಿಶಾಲವಾದ ತಳಹದಿಯ ಮೇಲೆ ಮತದ ಹಕ್ಕನ್ನು ಸ್ಥಾಪಿಸಲಾಯ್ತು. ಪ್ರಥಮ ಬಾರಿ ನೇರ ಪ್ರಾತಿನಿಧ್ಯದ ತತ್ತ್ವವನ್ನು ಮಾನ್ಯಮಾಡಲಾಯ್ತು. ೧೯೧೯ ರ ಸುಧಾರಣೆಯ ಪರಿಣಾಮವಾಗಿ ಇಡೀ ಭಾರತದಲ್ಲಿ ೬೦ ಲಕ್ಷ ಪ್ರಜೆಗಳು ಓಟಿನ ಹಕ್ಕನ್ನು ಪಡೆದರು. ದೊಡ್ಡ ಆಸ್ತಿವಂತರು ಮತ್ತು ಹೆಚ್ಚಿನ ತೆರಿಗೆದಾರರಿಗೆ ಮಾತ್ರ ಓಟಿನ ಹಕ್ಕನ್ನು ನೀಡಲಾಯ್ತು. ಉದಾಹರಣೆಗಾಗಿ, ಕೇಂದ್ರ ಲೆಜಿಸ್ಲೇಟಿವ್ ಕೌನ್ಸಿಲ್‌ನ ಚುನಾವಣೆಗೆ ೭೫೦ ರಿಂದ ೫೦೦೦ ರೂಪಾಯಿವರೆಗೆ ಭೂಗಂದಾಯ ಕೊಡುವವರು ಮತ್ತು ೧೦,೦೦೦ ದಿಂದ ೨೦,೦೦೦ ರೂಪಾಯಿವರೆಗೆ ವಾರ್ಷಿಕ ಆದಾ

ಯವಿರುವವರು ಮಾತ್ರ ಮತದಾನದ ಹಕ್ಕನ್ನು ಪಡೆದಿದ್ದರು.

ಭಾರತದ ಜನಸಂಖ್ಯೆ ಅಪಾರವಿದ್ದಾಗ್ಯೂ ಕೇವಲ ೬೦ ಲಕ್ಷ ಜನರು ಮತದ ಹಕ್ಕನ್ನು ಹೊಂದಿದ್ದರು. ೧೯೩೫ ನೆಯ ಭಾರತ ಶಾಸನವು ಮತದ ಹಕ್ಕನ್ನು ವಿಸ್ತೃತಗೊಳಿಸಿತು. ಈ ಶಾಸನದಿಂದ ಪ್ರಾಂತ ಶಾಸನಸಭೆಗಳಿಗೆ ಸ್ಪರ್ಧಿಸಿದ ಹುರಿಯಾಳು ಗಳಿಗೆ ಶೇಕಡ ೧೪ ರಷ್ಟು ಜನರು ಮತಕೊಡುವ ಹಕ್ಕನ್ನು ಪಡೆದರು.

೧೯೪೭ ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿ ನಮ್ಮ ದೇಶದವರಿಂದಲೇ ಹೊಸ ರಾಜ್ಯಾಂಗವು ನಿರ್ಧರಿಸಲ್ಪಟ್ಟಿತು. ಸ್ವತಂತ್ರ ಭಾರತ ರಾಜ್ಯಾಂಗವು ಪ್ರೌಢವಯಸ್ಕರೆಲ್ಲರಿಗೂ ಮತದ ಹಕ್ಕನ್ನು ಕೊಟ್ಟದೆ. ೨೧ ವರ್ಷ ವಯಸ್ಸಾದ ಎಲ್ಲ ಪ್ರಜೆಗಳೂ ಇಂದು ಓಟಿನ ಹಕ್ಕನ್ನು ಚಲಾಯಿಸಲು ಅವಕಾಶವಿದೆ. ವಿದ್ಯೆ, ಆದಾಯ, ಆಸ್ತಿ, ಮೊದಲಾದ ಅರ್ಹತೆಗಳನ್ನು ಲೆಕ್ಕಿಸದೆ ಗೊತ್ತಾದ ವಯಸ್ಸಿನ ಆಧಾರದ ಮೇಲೆ ಪ್ರೌಢರಾದ ಸ್ತ್ರೀ ಪುರುಷರಿಗೆ ಮತದ ಹಕ್ಕನ್ನು ಕೊಡಲಾಗಿದೆ.

ಪ್ರೌಢವಯಸ್ಕರಿಗೆಲ್ಲ ಮತದಾನದ ಹಕ್ಕು ಬಂದಿರುವುದು ಕ್ರಾಂತಿಕಾರಕವಾದ ವಿಷಯ. ಅವಿದ್ಯಾವಂತರೇ ಬಹುಸಂಖ್ಯಾತ ರಾಗಿರುವ ನಮ್ಮ ದೇಶದಲ್ಲಿ ಪ್ರೌಢವಯಸ್ಕರಿಗೆಲ್ಲರಿಗೂ ಓಟಿನ ಹಕ್ಕು ಕೊಟ್ಟಿರುವುದು ಅಪಾಯಕರವಾದ ಹೆಜ್ಜೆ ಎಂದು ಕೆಲವರು ಅಭಿಪ್ರಾಯ ಪಟ್ಟದ್ದಾರೆ. ಅವಿದ್ಯೆ, ಬಡತನ, ಅಜ್ಞಾನ, ಜಾತಿ ಮತ್ತು ವ್ಯಕ್ತಿ ದ್ವೇಷಗಳಿಂದ ಕೂಡಿರುವ ನಮ್ಮ ದೇಶದಲ್ಲಿ ಪ್ರೌಢವಯಸ್ಕ ಮತದಾನಪದ್ಧತಿಯು ಯಶಸ್ವಿಯಾಗುವುದು ಸಂದೇಹಾಸ್ಪದವೆಂದೂ ಕೆಲವರು ಭಾವಿಸಿದ್ದಾರೆ. ಸ್ವಿಟ್ಸರ್ಲೆಂಡಿನಂತಹ ಮುಂದುವರೆದ ಪಾಶ್ಚಾತ್ಯ ರಾಜ್ಯದಲ್ಲಿ ಮಹಿಳೆಯರಿಗೆ

ಇತ್ತೀಚಿನವರೆಗೂ ಮತದಾನದ ಹಕ್ಕನ್ನು ಕೊಟ್ಟಿರಲಿಲ್ಲ. ಹೀಗಿರುವಾಗ ಭಾರತದಂತಹ ಹಿಂದುಳಿದ ರಾಷ್ಟ್ರಕ್ಕೆ ಪ್ರೌಢ ವಯಸ್ಕರೆಲ್ಲರಿಗೂ ಓಟಿನ ಹಕ್ಕನ್ನು ಕೊಟ್ಟಿರುವುದು ಅಸಾಧಾರಣ ಮತ್ತು ಅವಾಸ್ತವಿಕವಾದುದೆಂದೂ ಹೇಳಲಾಗಿದೆ. ಪ್ರಾಪ್ತವಯಸ್ಕರಾದವರಿಗೆ ಓಟಿನ ಹಕ್ಕು ಕೊಡುವುದು ನ್ಯಾಯವಾದ ತತ್ತ್ವವಾದರೂ ೨೧ ವರ್ಷ ವಯಸ್ಸಾದವರೆಲ್ಲರಿಗೂ ಮತದಾನದ ಹಕ್ಕನ್ನು ಕೊಡದೆ ವಯಸ್ಸನ್ನು ಇನ್ನೂ ಹೆಚ್ಚಿಸಬಹುದಾಗಿತ್ತು ಎಂದೂ ಒಂದು ವಾದವಿದೆ. ಭಾರತದ ಸ್ಥಿತಿಗತಿಗಳನ್ನು ಗಮನಿಸಿದರೆ ಮೇಲಿನ ಅಭಿಪ್ರಾಯದಲ್ಲಿ ಸತ್ಯಾಂಶವಿಲ್ಲದೇ ಇಲ್ಲ. ಜನತೆಯ ಅಜ್ಞಾನ ಮೊದಲಾದವು ಒತ್ತಟ್ಟಿಗಿರಲಿ. ಪ್ರೌಢವಯಸ್ಕಮತದಾನದ ತಳಹದಿಯಮೇಲೆ ಏರ್ಪಟ್ಟ ಚುನಾವಣಾಕ್ಷೇತ್ರಗಳ ಮತದಾರರ ಸಂಖ್ಯೆಯು ಅಪರಿಮಿತವಾಗಿದೆ. ಹಿಂದಿನಕಾಲದಲ್ಲಿ ಅಸೆಂಬ್ಲಿಗೆ ನಿಲ್ಲುವ ಉಮೇದುವಾರರು ಕೇವಲ ಸುಮಾರು ೧೦೦೦ ಮತದಾರರನ್ನು ನೋಡಬೇಕಾಗುತ್ತಿತ್ತು. ಇಂದು ಅಸೆಂಬ್ಲಿಯ ಸ್ಪರ್ಧಿಗಳು ಏಕಸದಸ್ಯ ಚುನಾವಣಾ ಕ್ಷೇತ್ರವಾದರೆ ಸುಮಾರು ೪೦,೦೦೦ ಓಟುದಾರರನ್ನು ಸಂಧಿಸಿ ಮತದ ಯಾಚನೆ ಮಾಡಬೇಕು. ದ್ವಿಸದಸ್ಯ ಕ್ಷೇತ್ರ ಮತ್ತು ಲೋಕಸಭೆಯ ಸ್ಥಳಗಳಿಗೆ ಉಮೇದುವಾರರಾಗುವವರ ಪರಿಸ್ಥಿತಿಯನ್ನು ಊಹಿಸಿಕೊಳ್ಳಿರಿ. ಪ್ರೌಢವಯಸ್ಕ ಮತದಾನ ಪದ್ಧತಿಯು ಹೀಗೆ ವಿವಾದಾಸ್ಪದವಾದ ಸಂಗತಿಯಾಗಿದ್ದರೂ ಭಾರತ ರಾಜ್ಯಾಂಗಕರ್ತರು ಧೈರ್ಯದ ಹೆಜ್ಜೆಯನ್ನಿಟ್ಟರು. ಈಜುವುದನ್ನು ಕಲಿಯುವವರು ಛಳಿ ಎನ್ನುತ್ತಾ ಕುಳಿತುಕೊಳ್ಳದೆ ನೀರಿನಲ್ಲಿ ಧುಮುಕುವಂತೆ ಪ್ರೌಢರಾದ ಪ್ರಜೆಗಳಿಗೆ ಮತದ ಹಕ್ಕನ್ನು ಕೊಡಲಾಗಿದೆ. ಜನರು ಅವಿದ್ಯಾವಂತರಾದರೂ

ವ್ಯವಹಾರಜ್ಞಾನ ಮತ್ತು ರಾಜಕೀಯ ಬುದ್ಧಿವಂತಿಕೆ ಅವರಲ್ಲಿ ಇಲ್ಲದಿಲ್ಲ. ಯಾರು ತಮ್ಮ ಪ್ರತಿನಿಧಿಗಳಾಗಲು ಯೋಗ್ಯರು ಎಂಬುದನ್ನು ಅವರು ಗುರುತಿಸಬಲ್ಲರು. ಅವರ ಹೃದಯ ಪರಿಶುದ್ಧವಾಗಿದೆ, ಸಾಧಾರಣವಾಗಿ ಅವರು ತಪ್ಪು ಮಾಡುವುದಿಲ್ಲ. ಒಂದು ಪಕ್ಷ ಒಮ್ಮೆ ತಪ್ಪು ಮಾಡಿದರೂ ಇನ್ನೊಂದು ಸಲಕ್ಕೆ ತಿದ್ದಿಕೊಳ್ಳುತ್ತಾರೆ. ತಪ್ಪುಮಾಡಿ ತಿದ್ದಿಕೊಳ್ಳುವುದೇ ಪ್ರಜಾಪ್ರಭುತ್ವದ ಲಕ್ಷಣ. ಚುನಾವಣೆಗಳು ಆದಂತೆ ಜನಜಾಗೃತಿಯಾಗಿ ರಾಜಕೀಯ ಶಿಕ್ಷಣವಾಗುತ್ತದೆ. ೧೯೫೧ ರ ಮಹಾಚುನಾವಣೆ ಯಶಸ್ವಿಯಾಗಿ ನಡೆಯಲಿಲ್ಲವೇ? ಅನುಭವವಾದಂತೆ ಎಲ್ಲವೂ ಸರಿಹೋಗುತ್ತದೆ ಎಂದು ಇನ್ನು ಕೆಲವರು ಸಮಾಧಾನದ ಉತ್ತರ ಕೊಡುತ್ತಾರೆ. ಎಷ್ಟು ವಯಸ್ಸಾದವರು ಜವಾಬ್ದಾರಿಯುತವಾಗಿ ಮತವನ್ನು ಚಲಾಯಿಸಬಲ್ಲರು ಎಂಬುದು ವಾದಗ್ರಸ್ತ ವಿಷಯ. ಕೆಲವರು ಅತಿ ಚಿಕ್ಕ ವಯಸ್ಸಿನಲ್ಲಿಯೇ ಬುದ್ಧಿವಂತರಾಗಬಲ್ಲರು. ಇನ್ನು ಕೆಲವರು ೩೦ ವರ್ಷಗಳಾದರೂ ಅವರ ಮನಶ್ಶಕ್ತಿ ವಿಕಾಸವಾಗದಿರಬಹುದು. ಸಾಮಾನ್ಯವಾಗಿ ಸಂಪ್ರದಾಯ ಶರಣರು ೨೫ ವರ್ಷ ಮೇಲ್ಪಟ್ಟವರಿಗೆ ಓಟಿನ ಹಕ್ಕು ಕೊಡಬೇಕೆಂದೂ, ಉಗ್ರಗಾಮಿಗಳು ೧೮ ವರ್ಷ ಪ್ರಾಯದವರೆಲ್ಲರಿಗೂ ಓಟಿನ ಹಕ್ಕು ಲಭಿಸಬೇಕೆಂದೂ ಅಭಿಪ್ರಾಯಪಡುತ್ತಾರೆ. ಆದುದರಿಂದ ಪ್ರಾಪ್ತ ವಯಸ್ಕರು ಯಾರೆಂದು ಹೇಳುವುದು ಕಷ್ಟ.

ಒಟ್ಟಿನಲ್ಲಿ ಸ್ವತಂತ್ರ ಭಾರತದ ಚುನಾವಣೆಗಳು ಎರಡು ರೀತಿ ಸ್ವಾಗತಾರ್ಹವಾಗಿವೆ. ಒಂದನೆಯದಾಗಿ ಬ್ರಿಟಿಷರ ಕಾಲದಲ್ಲಿದ್ದ ಪ್ರತ್ಯೇಕ ಮತದಾನ ಪದ್ಧತಿಯನ್ನು ಸಂಪೂರ್ಣವಾಗಿ ತೆಗೆದು ಹಾಕಲಾಗಿದೆ. ಮಾರ್ಲೆ ಮಿಂಟೋ ಸುಧಾರಣೆಗಳಿಂದ ಜಾತೀಯ ಚುನಾವಣಾಕ್ಷೇತ್ರಗಳೇರ್ಪಟ್ಟಿದ್ದವು. ಮುಸಲ್ಮಾನರು ಮುಸ

ಲ್ಮಾನರಿಗೇ ಹಿಂದೂಗಳು ಹಿಂದೂಗಳಿಗೇ ಮಾತ್ರ ಓಟುಮಾಡುವ ಜಾತೀಯ ಪದ್ಧತಿಯನ್ನು ಬ್ರಿಟಿಷರು ಪ್ರೋತ್ಸಾಹಿಸಿದ್ದರು. ಪ್ರತ್ಯೇಕ ಮತದಾನ ಪದ್ಧತಿಯು ಕೋಮುವಾರು ದ್ವೇಷವನ್ನು ಹೆಚ್ಚಿಸಿ ಕೊನೆಗೆ ಭಾರತ ವಿಭಜನೆ ಕೂಡ ಆಗಿಹೋಯಿತು. ಸ್ವತಂತ್ರ ಭಾರತದಲ್ಲಿ ಪ್ರತ್ಯೇಕ ಚುನಾವಣಾ ಪದ್ಧತಿಗೆ ಅವಕಾಶ ವಿಲ್ಲ. ಎರಡನೆಯದಾಗಿ ನಮ್ಮ ದೇಶದ ಹತಭಾಗ್ಯರಾದ ಪರಿಗಣಿತ ವರ್ಗದವರಿಗೆ ಶಾಸನಸಭೆಗಳಲ್ಲಿ ಸ್ಥಾನವನ್ನು ೧೦ ವರ್ಷಗಳ ಕಾಲ ಮೀಸಲಾಗಿರಿಸಿದೆ. ಅವರ ಪ್ರಜಾಸಂಖ್ಯೆಗನುಗುಣವಾಗಿ ಅಸೆಂಬ್ಲಿ ಮತ್ತು ಲೋಕಸಭೆಗಳಲ್ಲಿ ಸ್ಥಳಗಳನ್ನು ಕಾಯ್ದಿರಿಸಲಾಗಿದೆ. ೧೦ ವರ್ಷಗಳ ತರುವಾಯ ಈ ರಿಯಾಯ್ತಿಯನ್ನು ಪಾರ್ಲಿಮೆಂಟು ಬೇಕಾದರೆ ಮುಂದುವರಿಸಬಹುದು.

ಶಿಕ್ಷಣ ಮತ್ತು ಇತರೆ ವಿಷಯಗಳಲ್ಲಿ ಹಿಂದುಳಿದಿರುವ ಪರಿಗಣಿತವರ್ಗದವರಿಗೆ ಸ್ಥಾನಗಳನ್ನು ಮೀಸಲಾಗಿರಿಸಿರುವುದರಿಂದ ಅನೇಕ ಹಿಂದುಳಿದವರ ಪ್ರತಿನಿಧಿಗಳು ಶಾಸನಸಭೆಗಳಿಗೆ ಆರಿಸಿಬರಲು ಸಾಧ್ಯವಾಗಿದೆ. ಅವರ ಪ್ರತಿನಿಧಿಗಳು ಮಂತ್ರಿಗಳಾಗಲು ಅವಕಾಶವಾಗಿದೆ. ಅಮೆರಿಕಾದಂತಹ ಮುಂದುವರೆದ ಪ್ರಜಾಪ್ರಭುತ್ವದಲ್ಲಿ ಶಾಸನಸಭೆಗಳಲ್ಲಿ ನಾಲ್ಕಾರು ನೀಗ್ರೋಪ್ರತಿನಿಧಿಗಳು ಸಿಕ್ಕುವುದು ಕಷ್ಟ. ಹೀಗಿರುವಾಗ ಭಾರತ ರಾಜ್ಯಾಂಗವು ಹಿಂದುಳಿದಿರುವ ಹರಿಜನರಿಗೆ ತುಂಬ ಸಹಾನುಭೂತಿಯನ್ನು ವ್ಯಕ್ತಪಡಿಸಿ ಅವರಿಗೆ ವಿಶೇಷ ಹಕ್ಕನ್ನು ಕಲ್ಪಿಸಿ ಅವರ ಏಳ್ಗೆಗೆ ದಾರಿಮಾಡಿಕೊಟ್ಟಿದೆ. ಇದು ಭಾರತೀಯರು ಹೆಮ್ಮೆಪಡಬೇಕಾದ ವಿಷಯ.

---

೩

# ಚುನಾವಣಾಕ್ಷೇತ್ರಗಳು

ನಮ್ಮ ಸಂವಿಧಾನದಲ್ಲಿ ಹೇಳಿರುವಂತೆ ವಯಸ್ಕರ ಮತದಾನ ಪದ್ಧತಿಯ ಪ್ರಕಾರ ಲೋಕಸಭೆಗೂ ರಾಜ್ಯಗಳ ವಿಧಾನಸಭೆಗಳಿಗೂ ಚುನಾವಣೆಗಳಾಗಬೇಕು. ಚುನಾವಣೆಗಳನ್ನು ಯಶಸ್ವಿಯಾಗಿ ನಡೆಸಬೇಕಾದರೆ ಚುನಾವಣಾಕ್ಷೇತ್ರಗಳನ್ನು ವಿಂಗಡಿಸಬೇಕು. ಆಡಳಿತ ನಡೆಸಲು ರಾಜ್ಯವನ್ನು ಜಿಲ್ಲೆಗಳನ್ನಾಗಿಯೂ ಜಿಲ್ಲೆಯನ್ನು ತಾಲ್ಲೂಕುಗಳನ್ನಾಗಿಯೂ ವಿಂಗಡಿಸುವಂತೆ ಲೋಕಸಭೆ ಮತ್ತು ರಾಜ್ಯಸಭೆಗಳ ಚುನಾವಣಾಕ್ಷೇತ್ರಗಳನ್ನು ಏರ್ಪಡಿಸುವುದು ಅನಿವಾರ್ಯ.

೧೯೫೧–೫೨ ರ ಮಹಾಚುನಾವಣೆಯನ್ನು ನಡೆಸಲು ಒಟ್ಟು ೪೦೧ ಲೋಕಸಭಾ ಚುನಾವಣಾಕ್ಷೇತ್ರಗಳಿದ್ದವು. ಲೋಕಸಭೆಗೆ ೪೯೦ ಪ್ರತಿನಿಧಿಗಳನ್ನು ಆರಿಸಬೇಕಾಗಿತ್ತು. ಚುನಾವಣಾಕ್ಷೇತ್ರಗಳನ್ನು ಏಕಸದಸ್ಯ ಮತ್ತು ಬಹುಸದಸ್ಯ ಕ್ಷೇತ್ರಗಳೆಂದು ವಿಂಗಡಿಸುವುದುಂಟು. ಏಕಚುನಾವಣಾಕ್ಷೇತ್ರದಲ್ಲಿ ಜನರು ಒಬ್ಬ ಪ್ರತಿನಿಧಿಯನ್ನು ಮಾತ್ರ ಆರಿಸಬೇಕು. ಒಬ್ಬರಿಗಿಂತ ಹೆಚ್ಚಿಗೆ ಪ್ರತಿನಿಧಿಗಳನ್ನು ಚುನಾಯಿಸುವ ಅವಕಾಶವಿದ್ದರೆ ಅಂತಹ ಕ್ಷೇತ್ರವನ್ನು ಬಹುಸದಸ್ಯ ಚುನಾವಣಾಕ್ಷೇತ್ರವೆಂದು ಕರೆಯುತ್ತೇವೆ.

ಚುನಾವಣಾಕ್ಷೇತ್ರಗಳನ್ನು ಯಾವ ತಳಹದಿಯ ಮೇಲೆ ವಿಂಗಡಿಸುತ್ತಾರೆ? ಜನಸಂಖ್ಯೆಯು ಚುನಾವಣಾಕ್ಷೇತ್ರವಿಂಗಡಣೆಯ ತಳಹದಿ. ಇಷ್ಟು ಜನಸಂಖ್ಯೆಗೆ ಒಬ್ಬ ಪ್ರತಿನಿಧಿ ಎಂಬ ತತ್ತ್ವದ ಮೇಲೆ ಚುನಾವಣಾಕ್ಷೇತ್ರಗಳನ್ನು ಏರ್ಪಡಿಸುತ್ತಾರೆ. ನಮ್ಮ ಸಂವಿಧಾನದ ಪ್ರಕಾರ ಎಲ್ಲ ಪ್ರಜೆಗಳೂ ಸರಿಸಮಾನರು.

ಪ್ರತಿ ಚುನಾವಣಾಕ್ಷೇತ್ರದಲ್ಲಿಯೂ ಒಂದು ಗೊತ್ತಾದ ಸಂಖ್ಯೆಯ ಪ್ರಜೆಗಳು ಒಬ್ಬ ಅಥವಾ ಹೆಚ್ಚಿನ ಸಂಖ್ಯೆಯ ಪ್ರತಿನಿಧಿಗಳನ್ನು ಚುನಾಯಿಸಿ ಕಳಿಸಬೇಕಾಗುತ್ತದೆ. ಲೋಕಸಭೆಗೆ ಒಬ್ಬ ಪ್ರತಿನಿಧಿಯನ್ನು ಆರಿಸುವ ಚುನಾವಣಾಕ್ಷೇತ್ರದ ಪ್ರಜಾಸಂಖ್ಯೆ ೫೦೦,೦೦೦ ಕ್ಕೆ ಕಡಿಮೆಯಿಲ್ಲದಂತೆಯೂ ೭೫೦,೦೦೦ಕ್ಕೆ ಹೆಚ್ಚಿಲ್ಲದಂತೆಯೂ ಇರಬೇಕೆಂದು ಸಂವಿಧಾನವು ನಮೂದಿಸಿದೆ.

ವಿಧಾನಸಭೆಗಳ ಚುನಾವಣಾಕ್ಷೇತ್ರಗಳು ಅಷ್ಟು ವಿಶಾಲವಾಗಿರುವುದಿಲ್ಲ. ಅಸೆಂಬ್ಲಿ ಚುನಾವಣಾಕ್ಷೇತ್ರಗಳನ್ನು ಕೂಡ ಪ್ರಜಾಸಂಖ್ಯೆಯ ಆಧಾರದ ಮೇಲೆ ಏರ್ಪಡಿಸಬೇಕು. ಒಬ್ಬ ಪ್ರತಿನಿಧಿಯನ್ನು ಚುನಾಯಿಸಬೇಕಾದ ಅಸೆಂಬ್ಲಿ ಚುನಾವಣಾಕ್ಷೇತ್ರದ ಜನಸಂಖ್ಯೆ ೭೫,೦೦೦ ಕ್ಕೆ ಕಡಿಮೆಯಿಲ್ಲದಂತೆ ಏರ್ಪಡಬೇಕೆಂದು ಸಂವಿಧಾನವು ಸೂಚಿಸುತ್ತದೆ. ಪ್ರತಿರಾಜ್ಯದಲ್ಲಿಯೂ ಸಾಧ್ಯವಾದಷ್ಟು ಸಮಾನ ಪ್ರಜಾಸಂಖ್ಯೆಯ ಚುನಾವಣಾಕ್ಷೇತ್ರಗಳನ್ನು ಏರ್ಪಡಿಸಬೇಕು.

ಚುನಾವಣಾಕ್ಷೇತ್ರಗಳನ್ನು ಏರ್ಪಡಿಸುವುದು ತುಂಬ ಕಷ್ಟದ ಕೆಲಸ. ತಾರತಮ್ಯವಿಲ್ಲದೆ ಸಮಾನತೆಯ ತಳಹದಿಯ ಮೇಲೆ ಲೋಕಸಭೆ ಮತ್ತು ವಿಧಾನಸಭೆಗಳ ಚುನಾವಣಾಕ್ಷೇತ್ರಗಳನ್ನು ವಿಂಗಡಿಸುವುದು ದೊಡ್ಡ ಹೊಣೆಯಾಗಿರುತ್ತದೆ. ಒಂದು ತಾಲ್ಲೂಕು ಒಂದು ಚುನಾವಣಾಕ್ಷೇತ್ರವಾಗಬಹುದು. ಅಥವಾ ಅದನ್ನು ಒಡೆದು ಎರಡು ಕ್ಷೇತ್ರಗಳನ್ನು ನಿರ್ಮಿಸಬಹುದು. ಇದರಿಂದ ಕೆಲವು ವೇಳೆ ಚುನಾವಣೆಗೆ ನಿಲ್ಲುವವರಿಗೂ ಮತದಾರರಿಗೂ ತೊಂದರೆಯಾಗಬಹುದು. ಒಂದು ತಾಲ್ಲೂಕಿನ ಜನರಲ್ಲಿ ಒಂದು ರೀತಿಯ ಅಭಿಮಾನ ಮತ್ತು ಸೌಹಾರ್ದಗಳೇರ್ಪಟ್ಟಿರುತ್ತವೆ. ತಾಲ್ಲೂಕಿನ ವಿಭಜನೆಯಾಗಿ ಚುನಾವಣಾಕ್ಷೇತ್ರಗಳೇರ್ಪಟ್ಟರೆ

ಜನರಿಗೆ ಓಟುಕೊಡುವಾಗ ಕಷ್ಟವೆನಿಸಬಹುದು. ತಮ್ಮ ತಾಲ್ಲೂಕಿನೊಡನೆ ನಿಕಟ ಸಂಪರ್ಕವಿರದವರು ಚುನಾವಣೆಗೆ ನಿಲ್ಲಬಹುದು. ಈ ರೀತಿಯ ತೊಂದರೆಗಳುಂಟಾಗುವುದು ಸ್ವಾಭಾವಿಕ. ಸಾಧ್ಯವಾದಷ್ಟೂ ತಾಲ್ಲೂಕುಗಳನ್ನು ಛಿದ್ರಮಾಡದೆ ಚುನಾವಣಾಕ್ಷೇತ್ರಗಳನ್ನೇರ್ಪಡಿಸಲು ಸರ್ಕಾರದವರು ಗಮನಕೊಡಬೇಕು. ಕೆಲವು ವ್ಯಕ್ತಿಗಳಿಗೆ ಅನುಕೂಲ ಮಾಡಿಕೊಡಲು ಸಿಕ್ಕಾಪಟ್ಟೆ ತಾಲ್ಲೂಕುಗಳನ್ನು ಹೋಳುಮಾಡಿ ಚುನಾವಣಾಕ್ಷೇತ್ರಗಳನ್ನು ನಿರ್ಮಿಸಕೂಡದು. ಅಕ್ಕಪಕ್ಕದ ಭೂಸಂಪರ್ಕ ಮತ್ತು ನೆರೆಹೊರೆಗಳನ್ನು ನಿರ್ಲಕ್ಷಿಸಿ ಕ್ಷೇತ್ರಗಳನ್ನು ಏರ್ಪಡಿಸಬಾರದು. ಅನಿವಾರ್ಯವಾದಾಗ ಮಾತ್ರ ತಾಲ್ಲೂಕುಗಳ ಸಮಗ್ರತೆಯನ್ನು ಒಡೆಯಬಹುದು.

ಪ್ರತಿರಾಜ್ಯದಲ್ಲಿ ಇಷ್ಟು ಸರಾಸರಿ ಪ್ರಜಾಸಂಖ್ಯೆಗೆ ಒಂದು ಅಸೆಂಬ್ಲಿ ಸ್ಥಾನವೆಂದು ನಿರ್ಣಯಿಸಬೇಕಾಗುತ್ತದೆ. ಆದರೆ ಅನಿವಾರ್ಯವಾದಾಗ ಶೇ|| ೧೦ ಕ್ಕೆ ಹೆಚ್ಚಾಗದಂತೆ ಗೊತ್ತಾದ ಸರಾಸರಿ ಪ್ರಜಾಸಂಖ್ಯೆಯನ್ನು ಹೆಚ್ಚು ಕಡಿಮೆ ಮಾಡಿಕೊಳ್ಳಬಹುದು. ಸಾಮಾನ್ಯವಾಗಿ ಅಸೆಂಬ್ಲಿ ಸ್ಥಾನ ಮತ್ತು ಲೋಕಸಭೆಯ ಸ್ಥಾನಗಳಿಗೂ ಒಂದು ಪ್ರಮಾಣವಿರುತ್ತದೆ. ಉದಾಹರಣೆಗೆ ೧೯೫೧ ರಲ್ಲಿ ಮದ್ರಾಸ್ ಅಸೆಂಬ್ಲಿಯ ಸ್ಥಾನಗಳು ೩೭೫ ಎಂದೂ ಮದ್ರಾಸ್ ರಾಜ್ಯದಿಂದ ಲೋಕಸಭೆಗೆ ೭೫ ಸ್ಥಾನಗಳೆಂದೂ ನಿರ್ಧರಿಸಲಾಗಿತ್ತು. ಮದ್ರಾಸ್ ರಾಜ್ಯದಲ್ಲಿ ಪ್ರತಿ ೫ ಅಸೆಂಬ್ಲಿ ಸ್ಥಾನಗಳಿಗೆ ಒಂದು ಲೋಕಸಭಾಸ್ಥಾನವಿತ್ತು. ಮುಂಬೈರಾಜ್ಯದಲ್ಲಿ ಪ್ರತಿ ೬೬ ಅಸೆಂಬ್ಲಿ ಚುನಾವಣಾಕ್ಷೇತ್ರಗಳಿಗೆ ಒಂದು ಪಾರ್ಲಿಮೆಂಟರಿ ಕ್ಷೇತ್ರವೇರ್ಪಟ್ಟಿತ್ತು.

## ಸ್ಥಾನಗಳ ಮೀಸಲು

ಹಿಂದುಳಿದ ಹರಿಜನರಿಗೆ (ಪರಿಶಿಷ್ಟವರ್ಗಗಳು) ಉತ್ತೇಜನ ಕೊಡುವ ಉದ್ದೇಶದಿಂದ ಅಸೆಂಬ್ಲಿ ಮತ್ತು ಲೋಕಸಭೆಗಳಲ್ಲಿ ಕೆಲವು ಸ್ಥಾನಗಳನ್ನು ಕಾಯ್ದಿರಿಸಲಾಗಿದೆ. ಈ ಸೌಕರ್ಯವು ೧೦ ವರ್ಷಗಳವರೆಗೆ ಮಾತ್ರ. ಬೇಕಾದರೆ ಅವಧಿಯನ್ನು ಬೆಳೆಸಲು ಪಾರ್ಲಿಮೆಂಟಿಗೆ ಅಧಿಕಾರವಿದೆ.

ಚುನಾವಣಾಕ್ಷೇತ್ರಗಳನ್ನು ವಿಂಗಡಿಸುವಾಗ ಪರಿಶಿಷ್ಟವರ್ಗದವರ ಜನಸಂಖ್ಯೆ ಇರುವ ಪ್ರದೇಶಗಳಲ್ಲಿ ಅವರಿಗಾಗಿ ವಿಶೇಷ ಚುನಾವಣಾ ಸೌಕರ್ಯವನ್ನೇರ್ಪಡಿಸಬೇಕು. ಅಧಿಕ ಸಂಖ್ಯೆಯಲ್ಲಿ ಅವರು ವಾಸಮಾಡುವ ಪ್ರದೇಶಗಳಲ್ಲಿ ಅವರಿಗಾಗಿ ಸ್ಥಾನಗಳನ್ನು ಮೀಸಲಿಡಬೇಕು. ಆಗ ಚುನಾವಣಾಕ್ಷೇತ್ರ ದೊಡ್ಡದಾಗುತ್ತದೆ. ಮತದಾರರ ಸಂಖ್ಯೆ ಎರಡರಷ್ಟಾಗುತ್ತದೆ. ಸ್ಪರ್ಧಿಗಳಿಗೆ ಇದರಿಂದ ತೊಂದರೆ ಮತ್ತು ಖರ್ಚು ಹೆಚ್ಚಾಗುತ್ತದೆ. ಆದರೆ ಹಿಂದುಳಿದವರ ಹಿತವನ್ನು ಕಾಪಾಡುವ ದೃಷ್ಟಿಯಿಂದ ಈ ವ್ಯವಸ್ಥೆ ಅನಿವಾರ್ಯ. ಸ್ಥಾನಗಳನ್ನು ಕಾಯ್ದಿಟ್ಟ ಕ್ಷೇತ್ರಗಳಿಂದ ಇಬ್ಬರನ್ನು ಚುನಾಯಿಸಬೇಕು. ಸಾಮಾನ್ಯವಾಗಿ ಸಾಮಾನ್ಯಸ್ಥಳಕ್ಕೂ ಕಾಯ್ದಿಟ್ಟ ಸ್ಥಳಕ್ಕೂ ಸ್ಪರ್ಧೆ ನಡೆಯುತ್ತದೆ. ಕಾಯ್ದಿಟ್ಟಸ್ಥಳಕ್ಕೆ ಪರಿಶಿಷ್ಟ ವರ್ಗದವರಲ್ಲದವರು ಸ್ಪರ್ಧಿಸುವಂತಿಲ್ಲ. ಪ್ರತಿ ಮತದಾರನೂ ಇಲ್ಲಿ ಒಂದು ಮತವನ್ನು ಸಾಮಾನ್ಯಸ್ಥಳಕ್ಕೆ ನಿಂತ ಸ್ಪರ್ಧಿಗೂ ಇನ್ನೊಂದು ಮತವನ್ನು ಕಾಯ್ದಿಟ್ಟಸ್ಥಳಕ್ಕೆ ನಿಂತ ಉಮೇದುವಾರನಿಗೂ ಕೊಡಬಹುದು ಅಥವಾ ಎರಡು ಮತಚೀಟಿಗಳನ್ನು ಯಾವುದೇ ಎರಡು ಬೇರೆ ಬೇರೆ ಮತಪೆಟ್ಟಿಗೆಗಳಿಗೆ ಹಾಕಬಹುದು. ಎರಡು ಮತಚೀಟಿಗಳನ್ನೂ ಒಂದೇ ಪೆಟ್ಟಿಗೆಯೊಳಗೆ

ಮಾತ್ರ ಹಾಕಬಾರದು. ಹಾಗೆ ಮಾಡಿದರೆ ಒಂದು ಓಟು ವ್ಯರ್ಥವಾಗುವುದು. ಇದರ ಜೊತೆಗೆ ಲೋಕಸಭೆಯ ಸ್ಥಾನಕ್ಕೆ ನಿಂತಿರುವವರಿಗೂ ಅದೇ ಮತದಾರ ಓಟನ್ನು ಕೊಡಬೇಕಾಗುತ್ತದೆ. ಸ್ಥಳಗಳನ್ನು ಕಾಯ್ದಿರಿಸಿದಾಗ್ಯೂ ಚುನಾವಣಾಕ್ಷೇತ್ರಗಳು ಸಂಯುಕ್ತ ಕ್ಷೇತ್ರಗಳು. ಪರಿಶಿಷ್ಟವರ್ಗದ ಹುರಿಯಾಳುಗಳು ತಮ್ಮ ಪಂಗಡದವರ ಮತ್ತು ಇತರರ ಮತಗಳನ್ನು ಪಡೆದು ಗೆಲ್ಲಬೇಕು.

ನಮ್ಮ ದೇಶದಲ್ಲಿ ಸಾಧಾರಣವಾಗಿ ಏಕಸದಸ್ಯ ಚುನಾವಣಾ ಕ್ಷೇತ್ರಗಳೇ ಅಧಿಕ. ಮೀಸಲು ಸ್ಥಾನಗಳಿರುವಾಗ ಇಬ್ಬರು ಪ್ರತಿನಿಧಿಗಳನ್ನು ಚುನಾಯಿಸುವ ದ್ವಿಸದಸ್ಯ ಚುನಾವಣಾ ಕ್ಷೇತ್ರಗಳಿರುತ್ತವೆ. ಇಡೀ ಭಾರತದಲ್ಲಿ ಮೂರು ಪ್ರತಿನಿಧಿಗಳನ್ನು ಚುನಾಯಿಸುವ ಚುನಾವಣಾ ಕ್ಷೇತ್ರಗಳಿರುವುದು ಎರಡು ಮಾತ್ರ. ಇಂಗ್ಲೆಂಡಿನಲ್ಲಿ ಕೂಡ ಏಕಸದಸ್ಯ ಕ್ಷೇತ್ರಗಳಿರುವ ಸಂಪ್ರದಾಯವಿದೆ. ಏಕಸದಸ್ಯ ಚುನಾವಣಾ ಕ್ಷೇತ್ರಗಳಿದ್ದರೆ ಶಾಸನಸಭೆಯಲ್ಲಿ ರಾಜಕೀಯ ಪಕ್ಷಗಳಿಗೆ ಬಹುಮತಸ್ಥಾನಗಳನ್ನು ಗಳಿಸಲು ಹೆಚ್ಚು ಅನುಕೂಲವಾಗುತ್ತದೆ.

---

೪

## ಚುನಾವಣಾ ಕಾನೂನು

ಚುನಾವಣೆಗಳಿಗೆ ಸಂಬಂಧಿಸಿದಂತೆ ಎಲ್ಲರೂ ಕಾನೂನಿನ ಕೆಲವು ಅಂಶಗಳನ್ನು ತಿಳಿದುಕೊಂಡಿರಬೇಕು. ಅವುಗಳನ್ನಿಲ್ಲಿ ೧೯೫೧ರ ಜನತಾ ಪ್ರಾತಿನಿಧ್ಯ ಕಾನೂನಿನಿಂದ ಸಂಗ್ರಹಿಸಲಾಗಿದೆ.

**ಚುನಾವಣಾ ಕ್ಷೇತ್ರಗಳು :**

ಪ್ರತಿ ರಾಜ್ಯದ ಪಾರ್ಲಿಮೆಂಟಿನ ಮತ್ತು ವಿಧಾನಸಭೆಯ ಚುನಾವಣಾ ಕ್ಷೇತ್ರಗಳನ್ನು ಪಾರ್ಲಿಮೆಂಟು ಕಾನೂನು ಮೂಲಕ ವಿಧಾಯಕ ಪಡಿಸುತ್ತದೆ. ರಾಷ್ಟ್ರಪತಿಯ ಆಜ್ಞೆಯಂತೆ ಚುನಾವಣಾ ಆಯೋಗವು ಪ್ರತಿ ರಾಜ್ಯದ ಚುನಾವಣಾ ಕ್ಷೇತ್ರಗಳನ್ನು ನಿರ್ಧರಿಸುತ್ತದೆ. ಪಾರ್ಲಿಮೆಂಟಿನ ತೀರ್ಮಾನದಂತೆ ಚುನಾವಣಾ ಕ್ಷೇತ್ರಗಳ ವಿಂಗಡಣೆಯಾಗುತ್ತದೆ.

**ಮತದಾರರು :**

ಚುನಾವಣೆಗಳನ್ನು ನಡೆಸುವ ಹೊಣೆ ಚುನಾವಣಾ ಆಯೋಗಕ್ಕೆ ಸೇರಿದೆ. ಚುನಾವಣೆಗಳನ್ನು ನಡೆಸಲು ಮೊದಲ ಹೆಜ್ಜೆ ಎಂದರೆ ಮತದಾರರ ಪಟ್ಟಿಯನ್ನು ಸಿದ್ಧಪಡಿಸುವುದು. ೨೧ ವರ್ಷ ಅಥವಾ ಹೆಚ್ಚಿನ ವಯಸ್ಸಾದ ಪ್ರತಿ ಭಾರತೀಯ ಹೆಂಗಸರು ಮತ್ತು ಗಂಡಸರು ಮತದಾರರಾಗುವ ಹಕ್ಕಿದೆ. ಭಾರತೀಯ ನಾಗರಿಕರಾಗದವರಿಗೂ, ಚುನಾವಣಾ ಅಕ್ರಮಗಳಿಗಾಗಿ ಶಿಕ್ಷೆಯಾದವರಿಗೂ ಮತದಾರರಾಗಲು ಅರ್ಹತೆಯಿಲ್ಲ. ಮತದಾರರ ಪಟ್ಟಿಯನ್ನು ಪ್ರತಿವರ್ಷ ಪರಿಶೀಲಿಸಿ ತಿದ್ದುಪಡಿ ಮಾಡಲಾಗುವುದು. ಸ್ಥಳೀಯ ಅಧಿಕಾರಿಗಳಿಗೆ ಅರ್ಜಿಹಾಕಿ ಪಟ್ಟಿಗೆ ಹೊಸ ಹೆಸರುಗಳನ್ನು ಸೇರಿಸಬಹುದು ಅಥವಾ ಬದಲಾವಣೆಗಳನ್ನು ಮಾಡಬಹುದು. ಹೆಸರು ವಿಳಾಸ ಇತ್ಯಾದಿ ತಪ್ಪಾಗಿ ಬಿದ್ದಿದ್ದರೆ ತಿದ್ದಬಹುದು. ನಿಮ್ಮ ಹೆಸರು ಮತದಾರರ ಪಟ್ಟಿಯಲ್ಲಿ ಸೇರಿರದಿದ್ದರೆ ನೀವು ಚುನಾವಣೆಗೆ ನಿಲ್ಲುವ ಹಕ್ಕು ಇಲ್ಲ. ಇದು ಎಲ್ಲರೂ ಗಮನಿಸಬೇಕಾದ ವಿಷಯ.

## ಉಮೇದುವಾರರು

ನಮ್ಮ ದೇಶದಲ್ಲಿ ೫ ವರ್ಷಗಳಿಗೊಮ್ಮೆ ಮಹಾಚುನಾವಣೆಗಳು ನಡೆಯುತ್ತವೆ. ಚುನಾವಣೆಗಳಲ್ಲಿ ಭಾಗವಹಿಸುವ ಅಭ್ಯರ್ಥಿಗಳಿಗೆ ಕೆಲವು ಅರ್ಹತೆಗಳಿರಬೇಕು. ನಮ್ಮ ಸಂವಿಧಾನವು ಈ ಅರ್ಹತೆಗಳನ್ನು ಗೊತ್ತುಪಡಿಸಿದೆ. ಮೊಟ್ಟಮೊದಲು ಮತದಾರನಲ್ಲದ ಯಾರೂ ಚುನಾವಣೆಗೆ ಉಮೇದುವಾರನಾಗುವಂತಿಲ್ಲ. ಉಮೇದುವಾರರಾಗಬಯಸುವವರು ಮತದಾರರ ಪಟ್ಟಿಯಲ್ಲಿ ತಮ್ಮ ಹೆಸರು ಇರುವುದನ್ನು ಸರಿಯಾಗಿ ನೋಡಿಕೊಂಡು ಮುಂದುವರೆಯಬೇಕು. ಇದು ಚುನಾವಣೆಗೆ ನಿಲ್ಲುವ ಎಲ್ಲರಿಗೂ ಇರಬೇಕಾದ ಸಾಮಾನ್ಯ ಅರ್ಹತೆ.

ಲೋಕಸಭೆ ಮತ್ತು ವಿಧಾನಸಭೆಗಳಿಗೆ ಸ್ಪರ್ಧಿಸುವವರಿಗೆ ೨೫ ವರ್ಷ ಅಥವಾ ಹೆಚ್ಚಿಗೆ ವಯಸ್ಸಾಗಿರಬೇಕು. ಕನಿಷ್ಠ ೨೫ ವರ್ಷಗಳಾದರೂ ತುಂಬಿರಬೇಕು. ವಿಧಾನಪರಿಷತ್ ಮತ್ತು ರಾಜ್ಯಸಭೆಗಳ ಸದಸ್ಯರಾಗಬಯಸುವವರಿಗೆ ಕನಿಷ್ಠ ೩೦ ವರ್ಷ ತುಂಬಿರಬೇಕು. ಈ ವಯಸ್ಸಿನ ಅರ್ಹತೆಯನ್ನು ಸಂವಿಧಾನವೇ ಗೊತ್ತುಪಡಿಸಿದೆ.

ಸಂವಿಧಾನವು ಚುನಾವಣೆಗೆ ನಿಲ್ಲಲು ಯಾರು ಅನರ್ಹರು ಎಂಬುದನ್ನು ತಿಳಿಸುತ್ತದೆ. ಸರ್ಕಾರಿ ನೌಕರರು ಚುನಾವಣೆಗೆ ನಿಲ್ಲುವಂತಿಲ್ಲ. ಸರ್ಕಾರದ ಕೆಲವು ಹುದ್ದೆಯಲ್ಲಿರುವವರಿಗೆ ಬೇಕಾದರೆ ಶಾಸನದ ಮೂಲಕ ವಿನಾಯಿತಿ ಕೊಡಬಹುದು. ೧೯೫೧ ರ ಜನತಾ ಪ್ರಾತಿನಿಧ್ಯ ಕಾನೂನಿನ ಪ್ರಕಾರ ಈ ಕೆಳಗೆ ಕಾಣಿಸಿದವರಿಗೆ ಚುನಾವಣೆಗೆ ನಿಲ್ಲುವ ಅಧಿಕಾರವಿಲ್ಲ.

(೧) ಜನತಾ ಪ್ರಾತಿನಿಧ್ಯ ಕಾನೂನಿನ ೧೪೩ನೆಯ ನಿಯಮದಂತೆ ನ್ಯಾಯಾಲಯದಿಂದ ಚುನಾವಣಾ ಅಕ್ರಮಗಳಿಗಾಗಿ

ಶಿಕ್ಷೆಗೆ ಗುರಿಯಾದವರು. (ಶಿಕ್ಷೆ ವಿಧಿಸಿದ ಆರು ವರ್ಷಗಳ ತರುವಾಯ ಈ ಅನರ್ಹತೆ ಹೋಗುತ್ತದೆ) ಇದೇ ರೀತಿ ಚುನಾವಣಾ ನ್ಯಾಯ ಮಂಡಳಿಯು ಚುನಾವಣೆಗೆ ಸಂಬಂಧಿಸಿದ್ದಂತೆ ತಪ್ಪು ಮಾಡಿದವರಿಗೆ ಅನರ್ಹತೆಯನ್ನು ವಿಧಿಸಿದ್ದರೆ ಅಂತಹ ತಪ್ಪಿತಸ್ಥರು.

(೨) ಎರಡು ವರ್ಷಕ್ಕೆ ಕಡಿಮೆಯಿಲ್ಲದಂತೆ ಸೆರೆಮನೆವಾಸವನ್ನನುಭವಿಸಲು ಕೋರ್ಟಿನಲ್ಲಿ ಶಿಕ್ಷೆ ಪಡೆದವರು. (ಈ ಅನರ್ಹತೆಯನ್ನು ಕಡಿಮೆಮಾಡಲು ಅಥವಾ ತೆಗೆಯಲು ಚುನಾವಣಾ ಆಯೋಗಕ್ಕೆ ಅಧಿಕಾರವಿದೆ. ಇಲ್ಲದಿದ್ದರೆ ಶಿಕ್ಷೆಯಾಗಿ ಸೆರೆಮನೆಯಿಂದ ಬಿಡುಗಡೆಯಾದಮೇಲೆ ಐದು ವರ್ಷಗಳಾಗುವವರೆಗೂ ಈ ಅನರ್ಹತೆಯನ್ನು ಅನುಭವಿಸಬೇಕಾಗುವುದು.

(೩) ಚುನಾವಣಾ ಖರ್ಚಿನ ಬಗ್ಗೆ ಸಕಾಲದಲ್ಲಿ ಮತ್ತು ಕ್ರಮವಾದ ರೀತಿಯಲ್ಲಿ ವಿವರಗಳನ್ನು ಕೊಡದೆ ಅನರ್ಹತೆಗೀಡಾಗಿದ್ದವರು.

(೪) ಲಂಚ ತಿಂದದ್ದಕ್ಕಾಗಿ ಅಥವಾ ಅವಿಧೇಯತೆಗಾಗಿ ಸರ್ಕಾರಿ ನೌಕರಿಯಿಂದ ಹೊರಗೆ ಹಾಕಲ್ಪಟ್ಟವರು; (ನೌಕರಿಯಿಂದ ತೆಗೆದ ತಾರೀಖಿನಿಂದ ೫ ವರ್ಷಗಳಾದ ಮೇಲೆ ಈ ಅನರ್ಹತೆ ಹೋಗುತ್ತದೆ.)

(೫) ಸರ್ಕಾರದ ಷೇರು ಅಥವಾ ಹಣಕಾಸಿನ ನೆರವು ಇರುವ ಸಂಸ್ಥೆಯ ಡೈರೆಕ್ಟರ್, ಮ್ಯಾನೇಜಿಂಗ್ ಏಜಂಟ್, ಅಥವಾ ಇತರ ಹುದ್ದೆಯಲ್ಲಿರುವವರು. (ಈ ಅನರ್ಹತೆಯನ್ನು ಕಾನೂನಿನಿಂದ ತೆಗೆದು ಹಾಕಬಹುದು.)

(೬) ಸರ್ಕಾರದ ಕಂಟ್ರಾಕ್ಟುಗಳ ಮೂಲಕ ಲಾಭ ಪಡೆಯುತ್ತಿರುವವರು. (ಇಲ್ಲಿ ಕೆಲವು ವಿನಾಯಿತಿಗಳನ್ನು ಕೊಡಲಾಗಿದೆ)

ಉಮೇದುವಾರರು ನಾಮಪತ್ರಗಳನ್ನು ಸಲ್ಲಿಸುವ ದಿನ ಮೇಲ್ಕಂಡ ಅನರ್ಹತೆಗಳಿರಕೂಡದು.

## ಮಹಾಚುನಾವಣೆಗಳ ಪ್ರಸಿದ್ಧ ಪತ್ರಿಕೆ

ಪಾರ್ಲಿಮೆಂಟಿನ ಚುನಾವಣೆಗಳ ವಿಷಯದಲ್ಲಿ ಗೆಜೆಟ್ಟನಲ್ಲಿ ಪ್ರಕಟಣೆಯನ್ನು ಹೊರಡಿಸಿ ರಾಷ್ಟ್ರಪತಿಯು ಪಾರ್ಲಿಮೆಂಟಿನ ಚುನಾವಣಾ ಕ್ಷೇತ್ರಗಳ ಮತದಾರರಿಗೆ ಕರೆ ಕೊಡುತ್ತಾರೆ. ವಿಧಾನಸಭೆಗಳ ಚುನಾವಣೆಗಳ ವಿಷಯದಲ್ಲಿ ರಾಜ್ಯಪಾಲರು ಆಯಾ ಚುನಾವಣಾ ಕ್ಷೇತ್ರಗಳ ಮತದಾರರಿಗೆ ಕರೆಯಿತ್ತು ಪ್ರಸಿದ್ಧ ಪತ್ರಿಕೆಯನ್ನು ರಾಜ್ಯದ ಗೆಜೆಟ್ಟನಲ್ಲಿ ಪ್ರಕಟಪಡಿಸುತ್ತಾರೆ. ತಮ್ಮ ತಮ್ಮ ಪ್ರತಿನಿಧಿಗಳನ್ನು ಆರಿಸಿ ಕಳಿಸುವ ವಿಷಯದಲ್ಲಿ ಕೊಡುವ ಸೂಚನೆಯಿದು. ಇಲ್ಲಿಂದ ಚುನಾವಣೆಗಳು ಪ್ರಾರಂಭವಾಗುತ್ತವೆಂದು ತಿಳಿಯಬೇಕು.

ಚುನಾವಣಾಧಿಕಾರಿಗಳನ್ನು ಚುನಾವಣಾ ಕಮಿಷನ್ನಿನವರು ನೇಮಕ ಮಾಡುತ್ತಾರೆ. ಪ್ರತಿ ಚುನಾವಣಾ ಕ್ಷೇತ್ರಕ್ಕೂ ರಿಟರ್ನಿಂಗ್ ಅಧಿಕಾರಿಯೂ ಸಹಾಯಕ ರಿಟರ್ನಿಂಗ್ ಅಧಿಕಾರಿಯೂ ಇರುತ್ತಾರೆ. ಕಾನೂನು ಮತ್ತು ನಿಯಮಗಳ ಪ್ರಕಾರ ಚುನಾವಣೆಗಳನ್ನು ನಡೆಸುವ ನೇರವಾದ ಜವಾಬ್ದಾರಿ ಇವರಿಗೆ ಸೇರಿದೆ. ರಿಟರ್ನಿಂಗ್ ಅಧಿಕಾರಿಗಳು ತಮಗೆ ಸಹಾಯ ಮಾಡುವ ಇತರ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಾರೆ. ಮುಖ್ಯವಾಗಿ ಪ್ರಿಸೈಡಿಂಗ್ ಮತ್ತು ಪೋಲಿಂಗ್ ಅಧಿಕಾರಿಗಳನ್ನು ನೇಮಕ ಮಾಡಲಾಗುತ್ತದೆ. ಪ್ರತಿ ಮತಕೇಂದ್ರದಲ್ಲಿಯೂ ಒಬ್ಬ ಪ್ರಿಸೈಡಿಂಗ್ ಅಧಿಕಾರಿಯಿರುತ್ತಾನೆ. ಚುನಾವಣೆಗಳನ್ನು ಯಾವ ತಂಟೆ ತಕರಾರುಗಳಿಲ್ಲದೆ ಶಾಂತವಾಗಿ ನಡೆಸುವುದು ಆತನ ಕರ್ತವ್ಯ.

## ಉಮೇದುವಾರರು ನಾಮಪತ್ರ ಸಲ್ಲಿಸುವುದು

ಸಂವಿಧಾನ ಮತ್ತು ಜನತಾ ಪ್ರಾತಿನಿಧ್ಯ ಕಾನೂನಿನ ಪ್ರಕಾರ ಅರ್ಹತೆ ಪಡೆದಿರುವವರು ಉಮೇದುವಾರರಾಗಬಹುದು. ಭಾರತೀಯ ನಾಗರಿಕರಾಗದವರು ಮತ್ತು ಮತದಾರರಲ್ಲದವರು ಚುನಾವಣೆಗೆ ನಿಲ್ಲುವಂತಿಲ್ಲ. ಅಸೆಂಬ್ಲಿ ಮತ್ತು ಲೋಕಸಭೆಗೆ ನಿಲ್ಲುವವರಿಗೆ ಕನಿಷ್ಠ ೨೫ ವರ್ಷ ತುಂಬಿರಬೇಕು. ರಾಜ್ಯಸಭೆ ಮತ್ತು ವಿಧಾನಪರಿಷತ್ತಿನ ಸದಸ್ಯರಾಗುವವರಿಗೆ ೩೦ ವರ್ಷ ತುಂಬಿರಬೇಕು.

ಅಸೆಂಬ್ಲಿ ಉಮೇದುವಾರರ ಹೆಸರನ್ನು ಆ ರಾಜ್ಯದ ಮತದಾರರೊಬ್ಬರು ಸೂಚಿಸಬೇಕು. ಲೋಕಸಭೆಯ ಉಮೇದುವಾರರ ಹೆಸರನ್ನು ಭಾರತದ ಯಾವ ರಾಜ್ಯದ ಮತದಾರನಾದರೂ ಸೂಚಿಸಬಹುದು. ನಾಮಪತ್ರದಲ್ಲಿ ಉಮೇದುವಾರರ ಪೂರ್ಣ ಹೆಸರು, ತಂದೆಯ ಅಥವಾ ಗಂಡನ ಹೆಸರು ಮತ್ತು ಮತದಾರರ ಪಟ್ಟಿಯಲ್ಲಿನ ಉಮೇದುವಾರರ ಹೆಸರಿನ ಕ್ರಮಸಂಖ್ಯೆ ಮೊದಲಾದ ವಿವರಗಳನ್ನು ಸೂಚಕರು ಕೊಡಬೇಕು. ಉಮೇದುವಾರರು ತಮ್ಮ ಸಮ್ಮತಿಯನ್ನು ವ್ಯಕ್ತಪಡಿಸಿ ತಮಗೆ ಎಷ್ಟು ವರ್ಷಗಳು ತುಂಬಿವೆ ಎಂಬುದನ್ನೂ ತಮಗೆ ಯಾವ ಗುರುತು ಬೇಕು ಎಂಬುದನ್ನೂ ತಿಳಿಸಬೇಕು.

ನಾಮಪತ್ರವನ್ನು ಗೊತ್ತಾದ ಕ್ರಮದಲ್ಲಿ ಭರ್ತಿಮಾಡಿ ರಿಟರ್ನಿಂಗ್ ಅಧಿಕಾರಿಗಳಿಗೆ ಸಕಾಲದಲ್ಲಿ ತಲುಪಿಸಬೇಕು. ಮೀಸಲು ಸ್ಥಾನಕ್ಕೆ ಸ್ಪರ್ಧಿಸುವವರು ತಾವು ಪರಿಗಣಿತವರ್ಗಕ್ಕೆ ಸೇರಿದವರೆಂಬ ಬಗ್ಗೆ ಹೇಳಿಕೆ ಸಮೇತ ನಾಮಪತ್ರ ಸಲ್ಲಿಸಬೇಕು.

## ಇಡುಗಂಟು

ನಾಮಪತ್ರದೊಡನೆ ಉಮೇದುವಾರರು ಹಣ ಕಟ್ಟಬೇಕು. ಇದನ್ನು ಠೇವಣಿ ಅಥವಾ ಇಡುಗಂಟು ಎನ್ನುತ್ತಾರೆ. ಲೋಕ ಸಭೆಗೆ ನಿಲ್ಲುವವರು ೫೦೦ ರೂಪಾಯಿಗಳನ್ನೂ ಕೌನ್ಸಿಲ್ ಅಥವಾ ಅಸೆಂಬ್ಲಿಗೆ ಸ್ಪರ್ಧಿಸುವವರು ೨೫೦ ರೂಪಾಯಿಗಳನ್ನು ಕಟ್ಟಬೇಕು. ಪರಿಗಣಿತವರ್ಗದವರಿಗೆ ಸಾಮಾನ್ಯಸ್ಥಳಕ್ಕೆ ಸ್ಪರ್ಧಿಸು ವವರು ಕಟ್ಟುವ ಅರ್ಧದಷ್ಟು ಹಣವನ್ನು ಕಟ್ಟಲು ರಿಯಾಯಿತಿ ತೋರಿಸಲಾಗಿದೆ. ಒಂದೇ ಚುನಾವಣಾ ಕ್ಷೇತ್ರದಲ್ಲಿ ಒಂದಕ್ಕಿಂತ ಹೆಚ್ಚಿಗೆ ನಾಮಪತ್ರಗಳನ್ನು ಒಬ್ಬ ವ್ಯಕ್ತಿಯೇ ಸಲ್ಲಿಸಿದರೂ ಕೂಡ ಒಂದೇ ಬಾರಿ ಠೇವಣಿ ಕಟ್ಟಿದರೆ ಸಾಕು.

ಸರ್ಕಾರಿ ನೌಕರನು ಕೂಡ ಮತದಾರನಾಗಿದ್ದರೆ ಉಮೇದು ವಾರರ ಹೆಸರನ್ನು ಸೂಚಿಸಬಹುದು. ಆದರೆ ಸರ್ಕಾರಿ ನೌಕರನು ಬೇರೆ ಯಾವ ರೀತಿಯಲ್ಲಿಯೂ ಉಮೇದುವಾರಿಕೆಗೆ ಬೆಂಬಲ ಕೊಡುವಂತಿಲ್ಲ. ಹಾಗೆಮಾಡಿದರೆ ಅದು ಚುನಾವಣಾ ಕಾನೂ ನಿಗೆ ವಿರೋಧವಾಗುವುದು. ಸರ್ಕಾರಿ ನೌಕರರು ಚುನಾವಣೆಗೆ ನಿಲ್ಲಬಾರದೆಂದು ಸಂವಿಧಾನ ಕಾನೂನು ಸ್ಪಷ್ಟಪಡಿಸಿದೆ.

## ನಾಮಪತ್ರಗಳ ಪರಿಶೀಲನೆ

ನಾಮಪತ್ರಗಳ ಪರಿಶೀಲನೆಯು ಚುನಾವಣೆಯಲ್ಲಿ ಎರಡ ನೆಯ ಘಟ್ಟ. ನಾಮಪತ್ರಗಳ ವಿಷಯದಲ್ಲಿ ಇತರ ಉಮೇದು ವಾರರ ಅಥವಾ ಅವರ ಅಧಿಕೃತ ಏಜಂಟರ ಆಕ್ಷೇಪಣೆಗಳು ನ್ಯಾಯಬದ್ಧವಾಗಿದ್ದರೆ ನಾಮಪತ್ರಗಳನ್ನು ತಿರಸ್ಕರಿಸಲು ರಿಟ ರ್ನಿಂಗ್ ಅಧಿಕಾರಿಗೆ ಅಧಿಕಾರ ಕೊಡಲಾಗಿದೆ. ಸಣ್ಣಪುಟ್ಟ ತಪ್ಪು ಗಳಿಗೆ ನಾಮಪತ್ರಗಳನ್ನು ತಿರಸ್ಕರಿಸುವಂತಿಲ್ಲ. ತಿರಸ್ಕರಿಸಿದಾಗ

ಕಾರಣಗಳನ್ನು ಕೊಡಬೇಕು. ಪರಿಶೀಲನೆ ನಡೆದಮೇಲೆ ಅಂಗೀಕರಿಸಿದ ನಾಮಪತ್ರಗಳಲ್ಲಿ ಸೂಚಿತವಾದ ಉಮೇದುವಾರರ ಪಟ್ಟಿಯನ್ನು ಪ್ರಕಟಿಸತಕ್ಕದ್ದು. ಉಮೇದುವಾರರಾಗಬಯಸುವರು ಯಾವ ಅನರ್ಹತೆಯನ್ನೂ ಹೊಂದಿರಬಾರದು. ನಾಮಪತ್ರ ಸಲ್ಲಿಸುವ ದಿನ ಆತನಿಗೆ ಚುನಾವಣಾ ಅನರ್ಹತೆಗಳಿರಕೂಡದು. ಒಂದು ಬಾರಿ ನಾಮಪತ್ರ ಸಲ್ಲಿಸಿದ ಒಬ್ಬ ಅಭ್ಯರ್ಥಿಯ ಹೆಸರು ಮತದಾರರ ಪಟ್ಟಿಯಲ್ಲಿರಲಿಲ್ಲ. ಆತನ ಉಮೇದುವಾರಿಕೆಯನ್ನು ಚುನಾವಣಾಧಿಕಾರಿಗಳು ತಿರಸ್ಕರಿಸಿಬಿಟ್ಟರು. ಆದ್ದರಿಂದ ನಾಮಪತ್ರಸಲ್ಲಿಸುವವರು ಎಚ್ಚರಿಕೆ ವಹಿಸಿ ಪೂರ್ಣ ವಿವರಗಳನ್ನು ಕೊಡಬೇಕು.

ನಾಮಪತ್ರ ತಿರಸ್ಕರಿಸಲ್ಪಟ್ಟರೆ ತಕ್ಷಣವೇ ಯಾವ ಪರಿಹಾರವೂ ದೊರೆಯಲಾರದು. ಚುನಾವಣೆಯಾದ ಮೇಲೆ ಈ ಬಗ್ಗೆ ತಕರಾರು ಹೂಡಬಹುದು. ಅರ್ಜಿಯನ್ನು ತಿರಸ್ಕರಿಸಿದ ಬಗ್ಗೆ ತಕ್ಷಣವೇ ತಡೆಯಾಜ್ಞೆ ಅಥವಾ ಅದನ್ನು ಸರಿಪಡಿಸುವ ಆಜ್ಞೆಯನ್ನು ಕೋರ್ಟಿನಿಂದ ತರಲು ಅವಕಾಶವಿಲ್ಲ. ಚುನಾವಣಾ ಅರ್ಜಿಯನ್ನು ಕೊಟ್ಟು ಚುನಾವಣೆಯನ್ನು ರದ್ದುಗೊಳಿಸಲು ಚುನಾವಣೆಯಾದ ಮೇಲೆ ಮಾತ್ರ ವಾದ ಹೂಡಬಹುದು. ಅದುದರಿಂದ ಉಮೇದುವಾರರಾಗುವವರು ಚುನಾವಣಾ ಕಾನೂನನ್ನು ಚೆನ್ನಾಗಿ ಗ್ರಹಿಸಿರಬೇಕಾದುದು ಅಗತ್ಯ.

ನಾಮಪತ್ರಗಳ ಪರಿಶೀಲನೆಯಾಗಿ ಅಂತಿಮವಾಗಿ ಉಮೇದುವಾರರ ಪಟ್ಟಿಯು ಪ್ರಕಟವಾದ ಮೇಲೆ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಕಾಲಾವಕಾಶವಿರುತ್ತದೆ. ಸಕಾಲದಲ್ಲಿ ವಾಪಸು ದೊರೆಯುತ್ತದೆ. ಚುನಾವಣಾ ಕಾನೂನಿನ ಇತ್ತೀಚಿನ ತಿದ್ದುಪಡಿಯ ಪ್ರಕಾರ ಉಮೇದುವಾರಿಕೆ ವಾಪಸ್ ಪಡೆಯುವ

ಅವಧಿಯು ಮುಗಿದಮೇಲೂ ಸಹ ಅಂದಿನಿಂದ ೧೦ ದಿನದೊಳಗಾಗಿ ಚುನಾವಣೆಯಿಂದ ಹಿಂತೆಗೆಯಲು ಅವಕಾಶ ಕೊಡಲಾಗಿದೆ. ಇದನ್ನು ಚುನಾವಣೆಯಿಂದ "ನಿವೃತ್ತಿ" ಪಡೆಯುವ ಕ್ರಮವೆಂದು ಹೇಳಬಹುದು. ಹೀಗೆ ನಿವೃತ್ತರಾದ ಉಮೇದುವಾರರ ಮತ ಪೆಟ್ಟಿಗೆಯನ್ನು ಮತಕೇಂದ್ರದಲ್ಲಿ ಇರಿಸುವುದಿಲ್ಲ. ಹೀಗೆ ನಿವೃತ್ತರಾದವರಿಗೆ ಠೇವಣಿ ಹಣ ವಾಪಸಾಗುವುದಿಲ್ಲ. ಚುನಾವಣೆಯಿಂದ ಹಿಂತೆಗೆಯಲು ಸಹಾಯಮಾಡುವುದೇ ಈ ತಿದ್ದುಪಡಿಯ ಉದ್ದೇಶ.

## ಉಮೇದುವಾರರು ನಿಧನಹೊಂದಿದಾಗ

ನಾಮಪತ್ರಗಳ ಸಲ್ಲಿಕೆಯಾದ ಮೇಲೆ ಅಂತಿಮವಾಗಿ ಸ್ಪರ್ಧಿಸುವವರ ಪಟ್ಟಿಯನ್ನು ಪ್ರಕಟಿಸುವುದರೊಳಗಾಗಿಯೇ ಉಮೇದುವಾರರು ತೀರಿಕೊಂಡರೆ ಅಂತಹ ಉಮೇದುವಾರರ ಹೆಸರನ್ನು ಪಟ್ಟಿಯಲ್ಲಿ ಸೇರಿಸುವುದಿಲ್ಲ. ೧೯೫೭ ರ ಮಹಾಚುನಾವಣೆಯಲ್ಲಿ ನಾಮಪತ್ರಗಳನ್ನು ಸಲ್ಲಿಸಿದ ಎರಡು ಮೂರು ದಿನಗಳಲ್ಲಿಯೇ ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ಚುನಾವಣಾ ಕ್ಷೇತ್ರದಲ್ಲಿ ಪಿ.ಎಸ್.ಪಿ. ಉಮೇದುವಾರರಾದ ಶ್ರೀ ಪಾಪಣ್ಣ ಎಂಬುವರು ನಿಧನರಾದರು. ಅಲ್ಲಿ ನಾಮಪತ್ರಗಳನ್ನು ಸಲ್ಲಿಸಿದ್ದ ಇನ್ನಿಬ್ಬರ ಪೈಕಿ ಒಬ್ಬರು ನಾಮಪತ್ರ ಹಿಂತೆಗೆದುಕೊಂಡದ್ದರಿಂದ ಉಳಿದ ಒಬ್ಬರೇ ಉಮೇದುವಾರರಾದ ಶ್ರೀ ಕುಂಬೂರು ರುದ್ರಪ್ಪನೆಂಬುವರು ಚುನಾಯಿತರಾದರೆಂದು ಘೋಷಿಸಲಾಯಿತು.

ನಾಮಪತ್ರಗಳ ಪರಿಶೀಲನೆಯಾಗಿ ಅಂತಿಮಪಟ್ಟಿಯನ್ನು ಪ್ರಕಟಿಸಿದಮೇಲೆ ಉಮೇದುವಾರರು ತೀರಿಕೊಂಡರೆ, ಅವರು ತೀರಿಕೊಂಡಾಗ ಮತದಾನ ಪ್ರಾರಂಭವಾಗಿರದಿದ್ದರೆ, ತಕ್ಷಣವೇ

ಚುನಾವಣೆಯನ್ನು ಮುಂದುವರಿಸಿ ಹೊಸದಾಗಿ ಮತ್ತೆ ಚುನಾವಣೆಗಳನ್ನು ಪ್ರಾರಂಭಿಸಬೇಕಾಗುತ್ತದೆ. ಆದರೆ ನಾಮಪತ್ರಗಳನ್ನು ಒಂದುಸಾರಿ ಸಲ್ಲಿಸಿದ್ದವರು ಮತ್ತೆ ಸಲ್ಲಿಸಬೇಕಾಗಿಲ್ಲ.

ಮತದಾನ ಪ್ರಾರಂಭವಾದ ಮೇಲೆ ಉಮೇದುವಾರರು ಮರಣ ಹೊಂದಿದರೆ ಅವರು ಬದುಕಿದ್ದರೆ ಹೇಗೆ ಚುನಾವಣೆ ನಡೆಸಬಹುದಾಗಿತ್ತೋ ಹಾಗೆ ಚುನಾವಣೆ ನಡೆಸಬೇಕು. ಎಣಿಕೆಯಾದಾಗ ಸತ್ತ ಉಮೇದುವಾರನು ಬಹುಮತ ಪಡೆದು ಚುನಾಯಿತನಾದರೆ ತಿರುಗಿ ಚುನಾವಣೆ ನಡೆಸಬೇಕು. ಮರುಚುನಾವಣೆಯಾಗುವ ತನಕ ಆ ಸ್ಥಾನವು ತೆರವಾಗಿರುತ್ತದೆ.

ಸ್ಪರ್ಧಿಸಿರುವವರ ಸಂಖ್ಯೆಯು ಆಯ್ಕೆಯಾಗಬೇಕಾದ ಸ್ಥಾನಗಳಿಗಿಂತಲೂ ಹೆಚ್ಚಾಗಿದ್ದರೆ ಮತದಾನ ನಡೆಯುವುದು. ಎರಡೂ ಸಮನಾಗಿದ್ದರೆ ಚುನಾವಣಾಧಿಕಾರಿಯು ಅಂತಹ ಉಮೇದುವಾರರು ಚುನಾಯಿತರಾದರೆಂದು ಸಾರುತ್ತಾನೆ.



## ಮತದಾನ

ಭಾರತದಲ್ಲಿ ಕೋಟಿಕೋಟಿ ಜನ ಮತದ ಹಕ್ಕನ್ನು ಪಡೆದಿದ್ದಾರಷ್ಟೆ. ಮತದ ಹಕ್ಕನ್ನು ಹೇಗೆ ಚಲಾಯಿಸಬೇಕೆಂಬುದು ಎಲ್ಲರೂ ತಿಳಿದಿರಬೇಕು. ಪಾಶ್ಚಾತ್ಯದೇಶಗಳಲ್ಲಿ ಉಮೇದುವಾರರ ಹೆಸರಿನ ಮುಂದೆ × ಗುರುತು ಹಾಕುವುದೇ ಓಟು ಮಾಡುವ ವಿಧಾನ. ಇದನ್ನು ಗುಪ್ತ ಮತದಾನವೆಂದು ಹೇಳುತ್ತಾರೆ. ನಮ್ಮ ದೇಶದಲ್ಲಿ ಸಹ ಓಟುಕೊಡುವುದು ರಹಸ್ಯವಾದ ವಿಷಯವೇ. ಆದರೆ ನಮ್ಮ ಮತದಾರರು × ಗುರುತು ಹಾಕಬೇಕಾಗಿಲ್ಲ. ಮತದಾರನಿಗೆ ಓಟಿನ ಚೀಟಿಯನ್ನು ಕೊಡಲಾಗುತ್ತದೆ. ಅದನ್ನು ತನಗೆ ಬೇಕಾದ ಉಮೇದುವಾರರ ಮತಪೆಟ್ಟಿಗೆಯಲ್ಲಿ ಹಾಕಿದರೆ

ಮತದಾನದ ಕೆಲಸ ಮುಗಿದಂತೆ. ಉಮೇದುವಾರರ ಪೆಟ್ಟಿಗೆಗಳನ್ನು ಗುರುತಿಸುವುದು ಸುಲಭ. ತಮಗೆ ಬೇಕಾದ ಉಮೇದುವಾರರ ಚುನಾವಣಾ ಚಿನ್ಹೆಯ ಚೀಟಿಯನ್ನು ಗುರುತಿಸಿ ಆ ಪೆಟ್ಟಿಗೆಗೆ ಓಟನ್ನು ಹಾಕಬೇಕು.

ಚುನಾವಣಾ ಪೆಟ್ಟಿಗೆಗಳಲ್ಲಿರುವ ಮತಗಳು ಸುರಕ್ಷಿತವಾಗಿಡಲ್ಪಟ್ಟು ಗೊತ್ತಾದ ದಿನ ಮತಗಳ ಎಣಿಕೆಯಾಗುತ್ತದೆ. ಬಹು ಮತ ಪಡೆದ ಉಮೇದುವಾರನು ಚುನಾಯಿತನಾಗುತ್ತಾನೆ. ಇಬ್ಬರು ಉಮೇದುವಾರರಿಗೆ ಸಮನಾಗಿ ಓಟು ಬಂದರೆ ಚೀಟಿಯನ್ನು ಎತ್ತಿಸಿ ಫಲಿತಾಂಶವನ್ನು ಪ್ರಕಟಿಸಬೇಕೆಂದು ಚುನಾವಣಾ ಕಾನೂನು ನಿರ್ದೇಶಿಸುತ್ತದೆ. ಚುನಾವಣಾಧಿಕಾರಿಯು ಫಲಿತಾಂಶವನ್ನು ಹೊರಪಡಿಸಿದ ದಿನದಿಂದ ಆ ಉಮೇದುವಾರನು ಚುನಾಯಿತನಾದನೆಂದು ಪರಿಗಣಿಸಬೇಕು.

ಒಂದೇ ಶಾಸನಸಭೆಗೆ ಒಂದಕ್ಕಿಂತಲೂ ಹೆಚ್ಚಿನ ಚುನಾವಣಾ ಕ್ಷೇತ್ರಗಳಿಂದ ಒಬ್ಬನೇ ವ್ಯಕ್ತಿ ಆರಿಸಲ್ಪಟ್ಟರೆ ಒಂದು ಸ್ಥಾನವನ್ನುಳಿಸಿಕೊಂಡು ಬಾಕಿ ಸ್ಥಾನಗಳಿಗೆ ಆ ವ್ಯಕ್ತಿ ನಿರ್ದಿಷ್ಟ ಕಾಲದಲ್ಲಿ ರಾಜೀನಾಮೆ ಕೊಡಬೇಕು. ಪಾರ್ಲಿಮೆಂಟು ಮತ್ತು ವಿಧಾನಸಭೆಗಳೆರಡರ ಸದಸ್ಯನಾಗಿ ಯಾರೂ ಮುಂದುವರೆಯುವಂತಿಲ್ಲ. ಎರಡು ಸಭೆಗಳಿಗೂ ಒಂದು ಪಕ್ಷ ಯಾರಾದರೂ ಚುನಾಯಿತರಾದರೆ ಒಂದಕ್ಕೆ ರಾಜಿನಾಮೆ ಕೊಡಬೇಕು.

## ಚುನಾವಣಾ ವೆಚ್ಚದ ವರದಿ

ಚುನಾವಣೆಗೆ ನಿಂತ ಉಮೇದುವಾರರು ತಾವು ಚುನಾವಣೆಗಾಗಿ ಮಾಡಿದ ಖರ್ಚಿನ ತಪಶೀಲನ್ನು ನಿರ್ದಿಷ್ಟ ಕಾಲದಲ್ಲಿ ಚುನಾವಣಾಧಿಕಾರಿಗಳಿಗೆ ವರದಿ ಮಾಡಬೇಕು. ಚುನಾವಣೆಯ

ವೆಚ್ಚವು ನಿಗದಿಮಾಡಿದ ಗಂಟಿಗಿಂತಲೂ ಹೆಚ್ಚಾಗಬಾರದೆಂದು ಕಾನೂನಿನಲ್ಲಿ ವಿಧಿಸಲಾಗಿದೆ. ಗೊತ್ತಾದ ವೇಳೆಯಲ್ಲಿ ಚುನಾವಣಾ ವೆಚ್ಚದ ಬಗ್ಗೆ ಸರಿಯಾದ ವರದಿ ಕೊಡದಿದ್ದರೆ ಚುನಾವಣಾ ಅನರ್ಹತೆಯು ತಲೆ ಮೇಲೆ ಬರುತ್ತದೆ.

## ಚುನಾವಣಾ ಅಪರಾಧಗಳು

ಚುನಾವಣೆಗಳು ನ್ಯಾಯವಾಗಿಯೂ ನಿಷ್ಪಕ್ಷಪಾತವಾಗಿಯೂ ನಡೆಯಬೇಕು. ಅನ್ಯಾಯದಿಂದ ಚುನಾವಣೆಯಲ್ಲಿ ಗೆಲ್ಲುವುದನ್ನು ತಡೆಗಟ್ಟಲು ಜನತಾ ಪ್ರಾತಿನಿಧ್ಯ ಕಾನೂನು (೧೯೫೧) ತಕ್ಕ ವ್ಯವಸ್ಥೆ ಮಾಡಿದೆ. ಲಂಚ ಕೊಡುವುದು, ನಾನಾ ರೀತಿಯ ಅನುಚಿತ ಪ್ರಭಾವ ಬೀರುವುದು, ಒಬ್ಬರ ಮತದ ಹಕ್ಕನ್ನು ಇನ್ನೊಬ್ಬರು ಚಲಾಯಿಸುವುದು, ಸ್ಪರ್ಧಿಗಳ ನಡತೆಯ ಬಗ್ಗೆ ಸಲ್ಲದ ಸುಳ್ಳು ಹೇಳಿಕೆಗಳನ್ನು ಹೊರಡಿಸುವುದು ಮೊದಲಾದ ನಡವಳಿಕೆಗಳು ಚುನಾವಣಾ ಅಪರಾಧವೆಂದು ಪರಿಗಣಿಸಿ ಅಂತಹ ಅಪರಾಧವೆಸಗಿದವರಿಗೆ ಶಿಕ್ಷೆವಿಧಿಸಲು ಕಾನೂನಿನಲ್ಲಿ ತಿಳಿಸಲಾಗಿದೆ. ಚುನಾವಣಾ ಭ್ರಷ್ಟಾಚಾರಗಳನ್ನು ತಡೆಗಟ್ಟಲು ಇಂತಹ ಕಾನೂನು ಅತ್ಯಗತ್ಯ. ಕಾನೂನು ಭಂಗಮಾಡಿ ಅಕ್ರಮವಾಗಿ ವರ್ತಿಸಿದ ವ್ಯಕ್ತಿಗಳು ಶಿಕ್ಷಾರ್ಹರು. ಸರ್ಕಾರಿ ನೌಕರರ ವರ್ಚಸ್ಸನ್ನು ಉಮೇದುವಾರರ ಆಯ್ಕೆಗೆ ಉಪಯೋಗಿಸಿಕೊಳ್ಳುವುದಾಗಲೀ, ಮತದಾರರನ್ನು ಮತಕೇಂದ್ರಕ್ಕೆ ಕರೆದೊಯ್ಯಲು ವಾಹನಗಳ ಏರ್ಪಾಟು ಮಾಡುವುದಾಗಲೀ ಚುನಾವಣಾ ಅಪರಾಧವಾಗುವುದು. ಮತೀಯ ಅಥವಾ ಧಾರ್ಮಿಕ ಪ್ರಚಾರ ಕೂಡ ಚುನಾವಣಾ ಅಪರಾಧವೆಂದು ಪರಿಗಣಿಸಲಾಗಿದೆ.

(೧) **ಲಂಚ:** ಹಣವನ್ನು ಕೊಡುವುದು ಅಥವಾ ಬೇರೆ

ರೂಪದಲ್ಲಿ ಸಹಾಯ ಮಾಡಿ ಮತ ಗಳಿಸುವುದು ಲಂಚವೆನ್ನಿಸಿಕೊಳ್ಳುತ್ತದೆ. ಲಂಚದ ಮೂಲಕ ಉಮೇದುವಾರರಾಗಲು ಪ್ರೋತ್ಸಾಹಿಸುವುದು ಅಥವಾ ಉಮೇದುವಾರಿಕೆಯನ್ನು ವಾಪಸ್ ತೆಗೆಸುವುದು ಚುನಾವಣಾ ಅಪರಾಧ. ಹಣವನ್ನು ತೆಗೆದುಕೊಂಡು ಮತ ಹಾಕುವುದು ಅಥವಾ ಮತ ಹಾಕದಿರುವುದು ಲಂಚವೆನಿಸಿಕೊಳ್ಳುತ್ತದೆ. ಹಣರೂಪದಲ್ಲಿಯೇ ಲಂಚ ಕೊಡಬೇಕಾಗಿಲ್ಲ. ಬೇರೆ ರೂಪದಲ್ಲಿ ಪ್ರಯೋಜನ ಹೊಂದಿ ಚುನಾವಣೆಯಲ್ಲಿ ಅಪರಾಧವೆಸಗಬಹುದು. ಜಮೀನು ಅಥವಾ ಬೇರೆ ಆಸ್ತಿಯನ್ನು ಕೊಡುವುದು, ನೌಕರಿ ಕೊಡಿಸುವೆನೆಂಬ ವಾಗ್ದಾನ, ಸಾಲ ಕೊಡುವುದು ಅಥವಾ ಸಾಲವನ್ನು ರದ್ದುಗೊಳಿಸುವುದು— ಇವೆಲ್ಲವೂ ಲಂಚದ ಹಲವಾರು ರೂಪಗಳು.

(೨) **ಸಲ್ಲದ ಪ್ರಭಾವ:** ಮತಗಳನ್ನು ಪಡೆಯಲು ಅನುಚಿತ ಪ್ರಭಾವ ಬೀರಬಾರದು. ಮತದಾರರು ಸ್ವಯಂಪ್ರೇರಣೆಯಂತೆ ಮತ ಚಲಾಯಿಸಲು ಅಡ್ಡಿಪಡಿಸುವುದು ಅನುಚಿತ ಪ್ರಭಾವವಾಗುತ್ತದೆ. ಉಮೇದುವಾರರು ಅಥವಾ ಅವರ ಬೆಂಬಲಿಗರು, ಜನ ಮತಕೊಡದಿದ್ದರೆ ಜಾತಿಯಿಂದ ಹೊರಗೆ ಹಾಕಿಸುವೆವು ಮುಂತಾಗಿ ಹೆದರಿಕೆ ಹಾಕುವುದು ಅನುಚಿತ ಪ್ರಭಾವ ಬೀರಿದಂತಾಗುತ್ತದೆ. ದೇವರ ಹೆಸರಿನಲ್ಲಿ ಮತದಾರರ ಮತವನ್ನು ಪಡೆಯುವುದು ಅಥವಾ ಮತ ಹಾಕುವುದನ್ನು ತಪ್ಪಿಸುವುದೂ ಒಂದು ರೀತಿಯ ಪ್ರಭಾವವೇ ಸರಿ. ಉಮೇದುವಾರನು ತನ್ನ ಚುನಾವಣೆಯ ಧೋರಣೆಗಳನ್ನು ಸಾರುವುದು ಅಥವಾ ಸಾರ್ವಜನಿಕ ಕಾರ್ಯಗಳನ್ನು ಮಾಡಿಸುವ ಬಗ್ಗೆ ನೀಡುವ ವಾಗ್ದಾನವು ಪ್ರಭಾವವೆನಿಸುವುದಿಲ್ಲ. ಮತದಾರರನ್ನು ಬಂಧಿಸಿಡುವುದು, ಮತದಾನ ಮಾಡದಂತೆ ಪ್ರತಿಬಂಧಿಸುವುದು ಮುಂತಾದವು ಅನು

ಚಿತ ಪ್ರಭಾವ ಅಥವಾ ಚುನಾವಣಾ ಕೈವಾಡವೆನಿಸಿಕೊಳ್ಳು ತ್ತವೆ.

(೩) **ಮತೀಯ ಪ್ರಚಾರ:** ಜಾತಿ, ಕುಲ, ಮತ, ಧರ್ಮ, ಗಳ ಹೆಸರಿನಲ್ಲಿ ಮನವಿ ಮಾಡುವುದು ಚುನಾವಣೆಯಲ್ಲಿ ನಿಷೇಧಿ ಸಲ್ಪಟ್ಟಿದೆ. ಒಬ್ಬ ಮತದಾರನು ತನ್ನ ಮತದ ಉಮೇದುವಾರ ನಿಗೇ ಮತ ಹಾಕಬೇಕೆಂದೂ, ಅನ್ಯಮತದ ಉಮೇದುವಾರನಿಗೆ ಮತ ಹಾಕಬಾರದೆಂದೂ ಮನವಿ ಮಾಡುವುದು ಮತೀಯ ಪ್ರಚಾರವಾಗುತ್ತದೆ.

(೪) **ಸುಳ್ಳು ಹೇಳಿಕೆಗಳು:** ವ್ಯಕ್ತಿಯ ವೈಯಕ್ತಿಕ ಶೀಲ ಅಥವಾ ನಡತೆಯ ಬಗ್ಗೆ ಸುಳ್ಳು ಹೇಳಿಕೆ ಕೊಡುವುದು ಚುನಾ ವಣೆಯ ಮೇಲೆ ತುಂಬ ಪರಿಣಾಮವನ್ನುಂಟುಮಾಡಬಹುದು. ಒಬ್ಬ ಉಮೇದುವಾರನ ವಿಷಯದಲ್ಲಿ ಸುಳ್ಳು ಪ್ರಚಾರ ಮಾಡು ವುದೂ ಅಪರಾಧವಾಗುತ್ತದೆ. ಉಮೇದುವಾರನೊಬ್ಬನು ಚುನಾ ವಣೆಗೆ ಸ್ಪರ್ಧಿಸಿಲ್ಲವೆಂದೂ, ಸ್ಪರ್ಧಿಸಿದ್ದರೂ ಉಮೇದುವಾರಿಕೆ ಯನ್ನು ವಾಪಸ್ ಪಡೆದರೆಂದೂ ಸುಳ್ಳು ಪ್ರಚಾರ ಮಾಡ ಕೂಡದು. ಆದರೆ ಉಮೇದುವಾರರ ರಾಜಕೀಯ ಮತ್ತು ಆರ್ಥಿಕ ಅಭಿಪ್ರಾಯಗಳನ್ನೂ ರಾಜಕೀಯ ನಡತೆಯನ್ನೂ ಟೀಕಿಸುವುದು ತಪ್ಪಾಗಲಾರದು.

(೫) **ವಾಹನಗಳ ಸೌಕರ್ಯ ನೀಡುವುದು:** ಮತ ದಾರರು ಉಮೇದುವಾರರ ವಾಹನಗಳನ್ನು ಉಪಯೋಗಿಸ ಬಾರದು. ತಮ್ಮ ಸ್ವಂತ ಗಾಡಿಗಳಲ್ಲಿ ಹೋಗಬಹುದು. ಸ್ವಂತ ಖರ್ಚಿನಿಂದ ಮತದಾರರು ಚುನಾವಣಾ ಕೇಂದ್ರಗಳಿಗೆ ಹೋಗಿ ಮತದಾನ ಮಾಡಬೇಕು. ಉಮೇದುವಾರರ ಪರವಾಗಿ ಯಾರೇ ಆಗಲೀ, ಉಚಿತವಾದ ವಾಹನ ಸೌಕರ್ಯವನ್ನೇರ್ಪಡಿಸುವುದು

ಚುನಾವಣಾ ಅಪರಾಧ.

(೬) **ಚುನಾವಣಾ ಖರ್ಚಿನ ಮಿತಿ :** ಚುನಾವಣೆಗೆ ನಿಂತ ಉಮೇದುವಾರರು ಸಿಕ್ಕಾಪಟ್ಟೆ ಹಣವನ್ನು ಖರ್ಚುಮಾಡಬಾರದೆಂದು ಚುನಾವಣಾ ಕಾನೂನು ವಿಧಿಸಿದೆ. ಇಷ್ಟೇ ಹಣಕ್ಕಿಂತ ಹೆಚ್ಚು ಖರ್ಚುಮಾಡಬಾರದೆಂದು ಸ್ಪಷ್ಟಪಡಿಸಿದೆ. ಹಣವುಳ್ಳವರು ಎಷ್ಟಾದರೂ ಹಣವನ್ನು ವೆಚ್ಚಮಾಡಿ ಆರಿಸಿ ಬರಬಹುದು. ಆದರೆ ಅದು ನ್ಯಾಯವಾದ ಚುನಾವಣೆ ಎನಿಸದು. ಕೆಲವು ಅನಿವಾರ್ಯ ಖರ್ಚುಗಳನ್ನು ಮಾಡಲೇಬೇಕು. ಅದಕ್ಕಾಗಿ ಇಷ್ಟೇ ಹಣಕ್ಕಿಂತ ಹೆಚ್ಚಿಗೆ ಹಣವನ್ನು ಚುನಾವಣೆಯಲ್ಲಿ ಖರ್ಚುಮಾಡಬಾರದೆಂದು ನಿಯಮಗಳು ವಿಧಿಸುತ್ತವೆ. ಅಧಿಕೃತವಾಗಿ ಮನ್ನಣೆ ಪಡೆದ ರಾಜಕೀಯಪಕ್ಷವು ಮಾಡುವ ಖರ್ಚನ್ನು ಉಮೇದುವಾರನ ಚುನಾವಣಾ ವೆಚ್ಚಕ್ಕೆ ಸೇರಿಸುವುದಿಲ್ಲ. ಅಧಿಕೃತ ಹಣಕ್ಕಿಂತಲೂ ಹೆಚ್ಚಿಗೆ ಖರ್ಚುಮಾಡಿ, ಅಪರಾಧವು ಕಂಡುಹಿಡಿಯಲ್ಪಟ್ಟರೆ ಅಪರಾಧಿಗಳಿಗೆ ತಕ್ಕ ಶಿಕ್ಷೆಯಾಗುತ್ತದೆ.

ಮೇಲಿನ ದೊಡ್ಡ ಅಪರಾಧಗಳಲ್ಲದೆ ಚುನಾವಣೆ ನಡೆಯುವ ಹತ್ತಿರ ಗಲಭೆ ಮಾಡುವುದು ಇತ್ಯಾದಿ ಸಣ್ಣಪುಟ್ಟ ಅಪರಾಧಗಳನ್ನು ಚುನಾವಣಾ ಕಾನೂನಿನಲ್ಲಿ ಕಾಣಿಸಲಾಗಿದೆ. ಮತಕೇಂದ್ರದಿಂದ ಓಟಿನ ಚೀಟಿಗಳನ್ನು ಹೊರಗೆ ತೆಗೆದುಕೊಂಡು ಹೋಗುವುದು, ಅಂತಹ ಕೆಲಸಕ್ಕೆ ಉತ್ತೇಜನ ಕೊಡುವುದು ಚುನಾವಣಾ ಅಪರಾಧಗಳು.ಅಂತಹ ಅಪರಾಧ ಮಾಡಿದವರಿಗೆ ಒಂದು ವರ್ಷದವರೆಗೂ ಕಾರಾಗೃಹವಾಸದ ಶಿಕ್ಷೆಯನ್ನೂ ಜುಲ್ಮಾನೆಯನ್ನೂ ವಿಧಿಸಬಹುದು. ಓಟಿನ ಚೀಟಿಗಳನ್ನು ತೆಗೆದುಕೊಂಡು ಹೋಗುವವರನ್ನು ಶೋಧಿಸಲು ಪೋಲೀಸರಿಗೆ ಅಧಿಕಾರವಿದೆ.

ಚುನಾವಣೆಗಳನ್ನು ನಡೆಸುವ ಅಧಿಕಾರಿಗಳು ಚುನಾವಣೆ

ಯಲ್ಲಿ ಪಕ್ಷಪಾತ ವಹಿಸಕೂಡದು. ಮತದಾರರನ್ನು ಯಾವ ರೀತಿಯಲ್ಲೂ ಅಡ್ಡದಾರಿಗೆಳೆಯಕೂಡದು. ಹಾಗೇನಾದರೂ ಅವರು ಉಮೇದುವಾರರ ಪರವಾಗಿ ಪ್ರಚಾರಮಾಡಿದುದು ಗೊತ್ತಾದರೆ ಆರು ತಿಂಗಳ ಕಾರಾಗೃಹವಾಸ ಮತ್ತು ಜುಲ್ಮಾನೆಗಳನ್ನು ಅನುಭವಿಸಬೇಕಾಗುವುದು. ರಿಟರ್ನಿಂಗ್ ಅಧಿಕಾರಿಗಳೂ, ಪ್ರಿಸೈಡಿಂಗ್ ಅಧಿಕಾರಿಗಳೂ ಮತ್ತು ಪೋಲಿಂಗ್ ಅಧಿಕಾರಿಗಳೂ ಚುನಾವಣೆಯಲ್ಲಿ ಕೈಹಾಕಬಾರದೆಂದು ಈ ರೀತಿಯ ವ್ಯವಸ್ಥೆ ಮಾಡಲಾಗಿದೆ.

ಚುನಾವಣಾ ಕಾನೂನನ್ನು ಉಲ್ಲಂಘಿಸಿ, ಅಪರಾಧವೆಸಗಿದ ಕೆಲವು ಸಂದರ್ಭಗಳಲ್ಲಿ ಶಾಸನಸಭೆಗಳಿಗೆ ನಿಲ್ಲುವ ಅರ್ಹತೆಯನ್ನು ಕಳೆದುಕೊಳ್ಳಬೇಕಾಗುವುದು. ಆರು ವರ್ಷಗಳವರೆಗೆ ಉಮೇದುವಾರಿಕೆ ಸಲ್ಲಿಸಲು ಅನರ್ಹತೆಯನ್ನು ಅನುಭವಿಸುವುದಲ್ಲದೆ ಮತದ ಹಕ್ಕನ್ನು ಕೂಡ ಕಳೆದುಕೊಳ್ಳಬೇಕಾಗುವುದು.

ನಮ್ಮ ದೇಶದಲ್ಲಿ ಚುನಾವಣಾ ಕಾನೂನನ್ನು ಎಲ್ಲರೂ ಚೆನ್ನಾಗಿ ತಿಳಿದುಕೊಂಡು ಅದರಂತೆ ವರ್ತಿಸಿ ನ್ಯಾಯವಾದ ಮತ್ತು ನಿರ್ಭಯದ ವಾತಾವರಣದಲ್ಲಿ ಚುನಾವಣೆಗಳು ನಡೆಯಲು ಸಹಾಯಕವಾಗುವುದು ಪ್ರತಿಯೊಬ್ಬರ ಕರ್ತವ್ಯವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಒಂದು ಪಕ್ಷ ಚುನಾವಣಾ ಕಾನೂನನ್ನು ಅಜ್ಞಾನದಿಂದ ಅಥವಾ ತಿಳಿದೂ ತಿಳಿದೂ ಉಲ್ಲಂಘಿಸಿ ನಡೆದರೆ ತಕ್ಕ ಶಿಕ್ಷೆಗೆ ಗುರಿಯಾಗಬೇಕು. ಸರ್ವರೂ ಸಹಕರಿಸಿದರೇ ಚುನಾವಣಾ ಅಪರಾಧಗಳನ್ನು ಆದಷ್ಟು ಕಡಮೆ ಮಾಡಬಹುದು.

---

೫

# ಚುನಾವಣಾ ವ್ಯಾಜ್ಯಗಳು

ನಮ್ಮ ಸಂವಿಧಾನದ ೩೨೯ ನೆಯ ವಿಧಿಯು ಚುನಾವಣಾ ಫಲಿತಾಂಶವನ್ನು ಚುನಾವಣಾ ಅರ್ಜಿಯ ಮೂಲಕವಲ್ಲದೆ ಬೇರೆ ಯಾವ ವಿಧದಲ್ಲಿಯೂ ಪ್ರಶ್ನಿಸುವಂತಿಲ್ಲವೆಂದು ತಿಳಿಸಿದೆ. ಈ ಚುನಾವಣಾ ವ್ಯಾಜ್ಯಗಳನ್ನು ಜನತಾ ಪ್ರಾತಿನಿಧ್ಯ ಕಾನೂನು ಪ್ರಕಾರ ಚುನಾವಣಾ ಪಂಚಾಯ್ತಿಗಳ ಮೂಲಕ ಪರಿಹರಿಸಿ ಕೊಳ್ಳಬೇಕು. ಚುನಾವಣೆಗಳು ನಡೆಯುವ ಅವಧಿಯಲ್ಲಿ ಎಂದರೆ ಚುನಾವಣಾ ಪ್ರಕಟಣೆಯಿಂದ ಫಲಿತಾಂಶವನ್ನು ಸಾರುವವರೆಗೂ ಯಾರೂ ಚುನಾವಣಾ ತಕರಾರುಗಳನ್ನು ಹೂಡುವಂತಿಲ್ಲ. ಫಲಿತಾಂಶ ಹೊರಬಿದ್ದಮೇಲೆ ಚುನಾವಣೆಯು ಅಕ್ರಮವಾಗಿ ನಡೆದಿದ್ದರೆ ಅದನ್ನು ರದ್ದುಗೊಳಿಸಲು ಸಂಬಂಧಪಟ್ಟವರು ಅರ್ಜಿ ಹಾಕಿಕೊಳ್ಳಬಹುದು. ಚುನಾವಣಾ ಅರ್ಜಿಗಳನ್ನು ಉಮೇದುವಾರರಾಗಿದ್ದವರು ಅಥವಾ ಮತದಾರರು ಸಲ್ಲಿಸಿ ವ್ಯಾಜ್ಯವನ್ನು ಇತ್ಯರ್ಥಪಡಿಸಲು ಚುನಾವಣಾ ಕಮಿಷನ್ನಿನವರನ್ನು ಪ್ರಾರ್ಥಿಸಬಹುದು. ಚುನಾವಣೆಯ ಫಲಿತಾಂಶ ಸಾರಲ್ಪಟ್ಟ ದಿನದಿಂದ ೪೫ ದಿನದೊಳಗೆ ಅರ್ಜಿಯನ್ನು ಸಲ್ಲಿಸಬೇಕು.

ಗೆದ್ದ ಉಮೇದುವಾರನ ಚುನಾವಣೆಯನ್ನು ರದ್ದುಗೊಳಿಸಬೇಕೆಂದು ಪ್ರಾರ್ಥಿಸುವ ಅರ್ಜಿಯಲ್ಲಿ ಈ ಕಾರಣಗಳನ್ನು ತಿಳಿಸಬೇಕು.

(ಅ) ಗೆದ್ದ ಉಮೇದುವಾರನಿಗೆ ಉಮೇದುವಾರನಾಗಲು ಅರ್ಹತೆ ಇರಲಿಲ್ಲ ಅಥವಾ ಅನರ್ಹತೆಯಿತ್ತು.

(ಆ) ಗೆದ್ದ ಉಮೇದುವಾರ ಅಥವಾ ಅವನ ಪರವಾಗಿ

ಪ್ರಚಾರ ಮಾಡಿದವರು ಚುನಾವಣಾ ಅಪರಾಧಗಳನ್ನೆಸಗಿದರು.

(ಇ) ಯಾವುದೇ ನಾಮಪತ್ರವನ್ನು ಅನುಚಿತವಾಗಿ ತಿರಸ್ಕರಿಸಲಾಯಿತು.

(ಈ) ಅನುಚಿತವಾಗಿ ಯಾವುದೇ ನಾಮಪತ್ರವನ್ನು ಅಂಗೀಕರಿಸಿದುದರಿಂದ, ಚುನಾವಣಾನಿಯಮಗಳನ್ನು ಉಲ್ಲಂಘಿಸಿದುದರಿಂದ ಚುನಾವಣೆಯ ಮೇಲೆ ಕೆಟ್ಟ ಪರಿಣಾಮವಾಯಿತು.

ಅರ್ಜಿದಾರನು ಗೆದ್ದ ಉಮೇದುವಾರನ ಚುನಾವಣೆಯನ್ನು ರದ್ದುಗೊಳಿಸಲು ಪ್ರಾರ್ಥಿಸುವುದರ ಜೊತೆಗೆ, ತಾನು ಅಥವಾ ಇತರ ಸ್ಪರ್ಧಿಯು ಚುನಾಯಿತನೆಂದು ಘೋಷಿಸಬೇಕೆಂದೂ ಕೋರಬಹುದು. ಚುನಾವಣಾ ಅಪರಾಧಗಳು ನಡೆಯದಿದ್ದರೆ, ಸರಿಯಾದ ರೀತಿಯಲ್ಲಿ ನಾಮಪತ್ರಗಳ ಪರಿಶೀಲನೆಯಾಗಿದ್ದರೆ ತನಗೇ ಅಥವಾ ಇತರ ಅಭ್ಯರ್ಥಿಗೇ ಬಹುಮತ ದೊರಕುತ್ತಿತ್ತೆಂದು ವಾದಿಸಬಹುದು.

ಚುನಾವಣಾ ಅರ್ಜಿಯನ್ನು ಸಕಾಲದಲ್ಲಿ ಸಲ್ಲಿಸದಿದ್ದರೆ, ಸಕಾರಣಗಳನ್ನು ಕೊಡದಿದ್ದರೆ, ಅರ್ಜಿಯೊಡನೆ ೧೦೦೦ ರೂಪಾಯಿ ಠೇವಣಿ ಹಣವನ್ನು ಕಟ್ಟದಿದ್ದರೆ ಚುನಾವಣಾ ಕಮಿಷನ್ ಅರ್ಜಿಯನ್ನು ತಿರಸ್ಕರಿಸಿಬಿಡಬಹುದು.

ಅರ್ಜಿಯನ್ನು ಅಂಗೀಕರಿಸಿದರೆ ಅದನ್ನು ಇತ್ಯರ್ಥಮಾಡಲು ಚುನಾವಣಾ ಪಂಚಾಯ್ತಿಗೆ ಒಪ್ಪಿಸುವುದು. ಚುನಾವಣಾ ಪಂಚಾಯ್ತಿಗೆ ಜಿಲ್ಲಾ ನ್ಯಾಯಾಧೀಶರೊಬ್ಬರನ್ನು ನೇಮಿಸಲಾಗುವುದು. ಬೇಕಾದರೆ ಹೈಕೋರ್ಟಿನ ನ್ಯಾಯಾಧೀಶರೊಬ್ಬರನ್ನು ನೇಮಿಸಲೂ ಬಹುದು. ಚುನಾವಣಾ ಅರ್ಜಿಯನ್ನು ಯಾವಘಟ್ಟದಲ್ಲಾದರೂ, ಕಾರಣಗಳನ್ನು ಕೊಟ್ಟು ಒಂದು ಪಂಚಾಯ್ತಿಯಿಂದ ಮತ್ತೊಂದು ಪಂಚಾಯ್ತಿಗೆ ವರ್ಗಮಾಡಲು

ಚುನಾವಣಾಕಮಿಷನ್ನಿಗೆ ಅಧಿಕಾರವಿದೆ.

ಚುನಾವಣಾ ವ್ಯಾಜ್ಯವನ್ನು ಆದಷ್ಟು ಬೇಗ ಇತ್ಯರ್ಥಪಡಿಸುವುದು ಪಂಚಾಯ್ತಿಯ ಕರ್ತವ್ಯ. ಆರು ತಿಂಗಳೊಳಗೇ ತೀರ್ಪು ಕೊಡಲು ಪ್ರಯತ್ನ ಪಡಲಾಗುವುದು. ಕೆಲವು ವೇಳೆ ತೀರ್ಪು ಕೊಡುವುದು ತಡವಾಗಬಹುದು. ಅಂತಹ ಸಂದರ್ಭವಲ್ಲಿ ಪಂಚಾಯ್ತಿಯ ಅಧಿಕಾರಾವಧಿಯನ್ನು ಹೆಚ್ಚಿಸಬಹುದು.

ಚುನಾವಣಾ ಪಂಚಾಯ್ತಿಯು ವಿಚಾರಣೆ ನಡೆಸಿ ತನ್ನ ತೀರ್ಪನ್ನು ಈ ಕೆಳಕಂಡ ರೀತಿ ವ್ಯಕ್ತಪಡಿಸಬಹುದು.

(ಅ) ಅರ್ಜಿಯನ್ನು ವಜಾಮಾಡಬಹುದು.

(ಆ) ಸ್ಪರ್ಧಿಸಿ ಗೆದ್ದವರೆಲ್ಲರ ಅಥವಾ ಗೆದ್ದ ಒಬ್ಬರ ಚುನಾವಣೆಯು ಅಕ್ರಮವೆಂದು ಸಾರಬಹುದು.

(ಇ) ಗೆದ್ದವರ ಚುನಾವಣೆಯನ್ನು ರದ್ದುಪಡಿಸುವುದಲ್ಲದೆ ಅರ್ಜಿದಾರರು ಅಥವಾ ಇತರ ಉಮೇದುವಾರರು ಚುನಾಯಿತರಾದರೆಂದು ಘೋಷಿಸಬಹುದು.

ಅರ್ಜಿಯ ವಿಚಾರಣೆಯಾಗುತ್ತಿರುವಾಗ ಮಧ್ಯದಲ್ಲಿ ಅರ್ಜಿಯನ್ನು ಕಮಿಷನ್ನಿನ ಅಪ್ಪಣೆ ಪಡೆದು ಹಿಂತೆಗೆದುಕೊಳ್ಳಬಹುದು.

## ಚುನಾವಣಾ ಪಂಚಾಯ್ತಿಯ ತೀರ್ಪಿನ ಮೇಲೆ ಅಪೀಲು

ಚುನಾವಣಾ ಪಂಚಾಯ್ತಿಯ ಆಜ್ಞೆಯು ಹೊರಬಿದ್ದ ೩೦ ದಿನದೊಳಗೆ ಅದರ ತೀರ್ಪಿನ ವಿರುದ್ಧವಾಗಿ ಹೈಕೋರ್ಟಿಗೆ ಅಪೀಲು ಹೋಗಬಹುದು. ಹೈಕೋರ್ಟು ಪಂಚಾಯ್ತಿ ಆಜ್ಞೆಗೆ ತಡೆಯನ್ನು ಹಾಕಬಹುದು. ಸಾಧಾರಣವಾಗಿ ೩ ತಿಂಗಳೊಳಗಾಗಿ ಅಪೀಲು ಇತ್ಯರ್ಥವಾಗಬೇಕು. ಹೈಕೋರ್ಟಿನ ತೀರ್ಪು

ಕೊನೆಯದು. ಇದರ ಮೇಲೆ ಅಪೀಲು ಇಲ್ಲ. ಆದರೆ ಸಂವಿಧಾನದ ೧೩೬ ನೆಯ ವಿಧಿಯ ಪ್ರಕಾರ ಸುಪ್ರೀಂಕೋರ್ಟು ಹೈಕೋರ್ಟಿನ ಅಥವಾ ಪಂಚಾಯ್ತಿಯ ತೀರ್ಪಿನ ಮೇಲೆ ಅಪೀಲು ಹಾಕಲು ವಿಶೇಷ ಅನುಮತಿ ಕೊಡಬಹುದು. ಹಾಗೆ ಅನುಮತಿ ಸಿಕ್ಕಿದ ಪಕ್ಷದಲ್ಲಿ ಸುಪ್ರೀಂ ಕೋರ್ಟಿನ ನಿರ್ಣಯವೇ ಕಟ್ಟಕಡೆಯದಾಗುತ್ತದೆ. ಚುನಾವಣಾ ವ್ಯಾಜ್ಯಕ್ಕೆ ಸಂಬಂಧಿಸಿದಂತೆ ಏನು ವಾಸ್ತವವಾಗಿ ಸಂಭವಿಸಿತು ಎಂಬ ಬಗ್ಗೆಯೂ ಕಾನೂನಿನ ನ್ಯಾಯಬದ್ಧತೆಯ ಬಗ್ಗೆಯೂ ಪರಿಶೀಲಿಸಿ ತೀರ್ಪು ಕೊಡಲು ಸುಪ್ರೀಂ ಕೋರ್ಟಿಗೆ ಅಧಿಕಾರವಿದೆ.

---

## ೬

# ರಾಜಕೀಯ ಪಕ್ಷಗಳು

ಪ್ರಜಾಪ್ರಭುತ್ವದಲ್ಲಿ ಸರ್ಕಾರವನ್ನು ರಚಿಸುವ ಹೊಣೆ ರಾಜಕೀಯ ಪಕ್ಷಗಳಿಗೆ ಸೇರಿದೆ. ಪ್ರಜಾಪ್ರಭುತ್ವ ಸರ್ಕಾರವೆಂದರೆ ಒಂದು ರಾಜಕೀಯ ಪಕ್ಷವು ಹೂಡುವ ಮಂತ್ರಿಮಂಡಲ. ಚುನಾವಣೆಯಲ್ಲಿ ವಿವಿಧ ರಾಜಕೀಯ ಪಕ್ಷಗಳು ಭಾಗವಹಿಸುತ್ತವೆ. ಅಧಿಕಾರಕ್ಕೆ ಬರಲು ಎಲ್ಲ ರಾಜಕೀಯ ಪಕ್ಷಗಳೂ ಪ್ರಯತ್ನಿಸುತ್ತವೆ. ಯಾವ ರಾಜಕೀಯ ಪಕ್ಷಕ್ಕೆ ಶಾಸನಸಭೆಯಲ್ಲಿ ಬಹುಮತ ದೊರೆಯುತ್ತದೋ ಆ ಪಕ್ಷವು ಆಳುವ ಪಕ್ಷವಾಗುತ್ತದೆ. ಉಳಿದ ಪಕ್ಷಗಳು ವಿರೋಧ ಪಕ್ಷವಾಗಿ ಕೆಲಸಮಾಡುತ್ತವೆ.

ಪ್ರಜಾಪ್ರಭುತ್ವವೆಂಬ ದೇಹಕ್ಕೆ ಆಳುವ ಪಕ್ಷ ಮತ್ತು ವಿರೋಧ ಪಕ್ಷಗಳೆರಡೂ ಒಂದೇ ದೇಹದ ಶ್ವಾಸಕೋಶಗಳಿದ್ದಂತೆ.

ರಾಜಕೀಯ ಪಕ್ಷಗಳು ದೇಶದ ರಾಜಕೀಯ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಯ ವಿಷಯದಲ್ಲಿ ಒಂದು ನಿರ್ದಿಷ್ಟವಾದ ನೀತಿಯನ್ನೂ ಕಾರ್ಯಕ್ರಮವನ್ನೂ ಅಂಗೀಕರಿಸಿ ಅವುಗಳ ಧ್ಯೇಯ-ಧೋರಣೆಗಳಿಗೆ ಜನಬೆಂಬಲ ಪಡೆದು ಚುನಾವಣೆಗಳ ಮೂಲಕ ಅಧಿಕಾರಕ್ಕೆ ಬರಲು ಸ್ಪರ್ಧಿಸುತ್ತವೆ. ಜನರು ತಮಗೆ ಇಷ್ಟಬಂದ ಪಕ್ಷಕ್ಕೆ ಬೆಂಬಲ ಕೊಡಬಹುದು. ರಾಜಕೀಯ ಪಕ್ಷಗಳ ಸಂಘಟನೆ ಅವುಗಳ ನಾಯಕತ್ವವನ್ನವಲಂಬಿಸಿದೆ. ಉತ್ತಮ ಮಟ್ಟದ, ದೇಶಾಭಿಮಾನಿಗಳಾದ ನಾಯಕರಿರುವ ರಾಜಕೀಯ ಪಕ್ಷವು ಜನತೆಯ ಬೆಂಬಲ ಗಳಿಸಬಲ್ಲದು. ಶಿಸ್ತು, ಮೇಲ್ಮಟ್ಟದ ಕಾರ್ಯಕರ್ತರು, ಸಾಕಷ್ಟು ಹಣ ಮತ್ತು ಉನ್ನತ ನಾಯಕರ ಮಾರ್ಗದರ್ಶನ ಪಡೆದ ರಾಜಕೀಯ ಪಕ್ಷವು ತನ್ನ ಧೋರಣೆಗಳನ್ನು ಜನತೆಯ ಮುಂದಿಟ್ಟು ಜನಪ್ರಿಯತೆಯನ್ನು ಗಳಿಸಬಲ್ಲದು.

ರಾಜಕೀಯ ಪಕ್ಷಗಳು ಕೇವಲ ಅಧಿಕಾರಕ್ಕಾಗಿ ಕಿತ್ತಾಡದೆ ರಾಷ್ಟ್ರದ ಹಿತಕ್ಕಾಗಿಯೂ ಜನರ ಏಳ್ಗೆಗಾಗಿಯೂ ಶ್ರಮಿಸಬೇಕು. ಚುನಾವಣೆಗೆ ಸರಿಯಾದ ಉಮೇದುವಾರರನ್ನು ನಿಲ್ಲಿಸುವುದು ರಾಜಕೀಯ ಪಕ್ಷಗಳ ಕರ್ತವ್ಯ. ಯೋಗ್ಯ ಉಮೇದುವಾರರನ್ನು ಸ್ಪರ್ಧಿಸಲು ಆಯ್ಕೆ ಮಾಡುವುದು ಪಕ್ಷದ ಪ್ರಮುಖ ಜವಾಬ್ದಾರಿ ಯೋಗ್ಯ ಉಮೇದುವಾರರನ್ನು ಆರಿಸಿದರೆ ಯೋಗ್ಯ ಸರ್ಕಾರವನ್ನು ರಚಿಸಲು ಸಹಾಯಕವಾಗುತ್ತದೆ. ಚುನಾವಣೆಯಲ್ಲಿ ಗೆಲ್ಲುವವರನ್ನೇ ಆರಿಸಬೇಕೆಂಬುದು ಒಂದು ಅಭಿಪ್ರಾಯ. ಈ ದೃಷ್ಟಿಯಿರಬಾರದೆಂದಲ್ಲ. ಜೊತೆಗೆ ವ್ಯಕ್ತಿಯ ಶೀಲ, ಅನುಭವ, ದಕ್ಷತೆ, ಪ್ರಾಮಾಣಿಕತೆ, ಪಕ್ಷಕ್ಕೆ ಸಲ್ಲಿಸಿರುವ ಸೇವೆ ಮೊದಲಾದ

ವುಗಳೂ ಮುಖ್ಯ ಅರ್ಹತೆಗಳು. ಕೇವಲ ಹಣವುಳ್ಳವರಿಗೆ ಅಥವಾ ಹೇಳಿದಂತೆ ಕೇಳುವ ಅವಿದ್ಯಾವಂತರಿಗೆ ಪಕ್ಷದ ಬೆಂಬಲ ನೀಡುವುದು ಸಾಧುವಾದುದಲ್ಲ.

ರಾಜಕೀಯ ಪಕ್ಷಗಳು ಕೆಲವು ಒಳ್ಳೆಯ ಸಂಪ್ರದಾಯಗಳನ್ನು ಪಾಲಿಸಬೇಕು. ಪಕ್ಷದ ಉಮೇದುವಾರರನ್ನು ಜನ ಮೆಚ್ಚಿ ಮತ ಕೊಡುವಂತಿರಬೇಕು. ಅವರು ತಮ್ಮ ಚುನಾವಣಾ ಕ್ಷೇತ್ರಗಳ ಜನತೆಯ ವಿಶ್ವಾಸ ಗಳಿಸಿರಬೇಕು. ರಾಜಕೀಯ ಪಕ್ಷಗಳು ಚುನಾವಣಾ ಟಿಕೇಟುಗಳನ್ನು ಕೊಡುವಾಗ ತುಂಬ ಎಚ್ಚರಿಕೆ ವಹಿಸಬೇಕು. ಭಾರತದಲ್ಲಿ ಚುನಾವಣಾ ಟಿಕೇಟುಗಳನ್ನು ಗಳಿಸುವುದು ಒಂದು ರಾಷ್ಟ್ರೀಯ ಉದ್ಯಮವಾಗಿ ಬಿಟ್ಟಿದೆ. ರಾಜಕೀಯ ಪಕ್ಷದಲ್ಲಿ ಕೆಲವು ಜನರು ತಮ್ಮ ಮಹತ್ವಾಕಾಂಕ್ಷೆಗಳನ್ನು ಸಾಧಿಸಿಕೊಳ್ಳಲು ಯಾವ ತತ್ತ್ವವನ್ನೂ ಮನ್ನಿಸದೆ ತಮಗೆ ಬೇಕಾದವರನ್ನು ಪಕ್ಷದ ಉಮೇದುವಾರರನ್ನಾಗಿ ನಿಲ್ಲಿಸುವುದುಂಟು. ನಿಷ್ಠಾವಂತ ಸೇವಕರನ್ನು ಬಿಟ್ಟು ನಿಷ್ಪ್ರಯೋಜಕರನ್ನು ಆರಿಸುವುದುಂಟು. ಇದು ಅಪಾಯಕರ ಹೆಜ್ಜೆ. ಈ ವಿಷಯದಲ್ಲಿ ಇಂಗ್ಲೆಂಡಿನಲ್ಲಿ ರಾಜಕೀಯ ಪಕ್ಷಗಳು ಒಳ್ಳೆಯ ಸಂಪ್ರದಾಯಗಳನ್ನು ಪಾಲಿಸುತ್ತಿವೆ. ರಾಜಕೀಯ ಪಕ್ಷದ ಟಿಕೇಟು ದೊರಕುವುದು ಮೇಲಿನವರ ಅಥವಾ ಒಬ್ಬಿಬ್ಬರ ಕೃಪೆಯನ್ನವಲಂಬಿಸಬಾರದು, ಪಕ್ಷದ ಆಯಾ ತಾಲೂಕು ಅಥವಾ ಜಿಲ್ಲಾ ಸಂಸ್ಥೆಗಳು ಸರ್ವಾನುಮತದಿಂದ ಅಥವಾ ಬಹುಮತದಿಂದ ಶಿಫಾರಸು ಮಾಡಿದ ಅಭ್ಯರ್ಥಿಗಳನ್ನೇ ಚುನಾವಣಾ ಸಮಿತಿಗಳು ತಪ್ಪದೆ ಆರಿಸಬೇಕು. ಸರ್ವಾನುಮತದಿಂದ ಜಿಲ್ಲಾ ಸಮಿತಿಗಳು ಆರಿಸಿದ ಉಮೇದುವಾರರನ್ನು ತೆಗೆದುಹಾಕುವುದು ಸಾಧುವಾದುದಲ್ಲ, ಪ್ರಜಾಸತ್ತಾತ್ಮಕವಲ್ಲ. ಸಾಧ್ಯವಾದಷ್ಟು ಆಯಾ

ಸ್ಥಳದವರನ್ನೇ ಉಮೇದುವಾರರನ್ನಾಗಿ ಆರಿಸುವುದು ಒಳ್ಳೆಯದು. ಹೊರಗಿನವರನ್ನು ಒಂದು ಕ್ಷೇತ್ರದ ಜನರ ತಲೆಯ ಮೇಲೆ ತಂದುಹಾಕುವುದು ತಪ್ಪು. ಪ್ರಾದೇಶಿಕ ಪ್ರಾತಿನಿಧ್ಯವೇ ನಮ್ಮ ಚುನಾವಣೆಗಳ ಗುರಿ. ಈ ತತ್ತ್ವವನ್ನು ಬದಿಗೊತ್ತಿ ಎಲ್ಲಿಯವರನ್ನೋ ಯಾವ ಕ್ಷೇತ್ರಕ್ಕಾದರೂ ನಿಲ್ಲಿಸುವುದು ಒಳ್ಳೆಯದಲ್ಲ. ಆಯಾ ಸ್ಥಳದಲ್ಲಿ ವಾಸಮಾಡುವವರನ್ನೂ ಆ ಸ್ಥಳದವರ ಹಿತಗಳನ್ನು ಕಾಪಾಡುವವರನ್ನೂ ಉಮೇದುವಾರರನ್ನಾಗಿ ಆರಿಸಬೇಕು. ಒಂದು ಜಿಲ್ಲೆಯೊಂದಿಗೆ ಸಂಪರ್ಕವಿಲ್ಲದ ವ್ಯಕ್ತಿಯನ್ನು ಅಕಸ್ಮಾತ್ತಾಗಿ ಜನರು ಪಕ್ಷದ ಉಮೇದುವಾರರೆಂದು ಆರಿಸಿದರೆಂದು ಭಾವಿಸಿಕೊಳ್ಳಿರಿ. ಆ ಜಿಲ್ಲೆಯನ್ನು ರದ್ದುಗೊಳಿಸಬೇಕೆಂಬ ಪ್ರಶ್ನೆ ಬಂದರೆ ಆಗ ಆ ಪ್ರತಿನಿಧಿಯು ತಮ್ಮ ಚುನಾವಣಾಕ್ಷೇತ್ರದ ಅಭಿಪ್ರಾಯವನ್ನು ಪ್ರತಿಬಿಂಬಿಸದೆ ಹೋಗಬಹುದು. ಆದುದರಿಂದ ಸಾಧಾರಣವಾಗಿ ಆಯಾ ಜಿಲ್ಲೆಯವರನ್ನು ಆಯಾ ಜಿಲ್ಲೆಯಲ್ಲಿ ಉಮೇದುವಾರರನ್ನಾಗಿ ಆರಿಸುವುದು ಎಲ್ಲರ ದೃಷ್ಟಿಯಿಂದಲೂ ಒಳ್ಳೆಯ ಮಾರ್ಗ.

## ಜನರ ಮತ ವ್ಯಕ್ತಿಗೋ ಅಥವಾ ಪಕ್ಷಕ್ಕೋ ?

ನಿಮ್ಮ ಓಟು ಯಾರಿಗೆ? ವ್ಯಕ್ತಿಗೋ ಅಥವಾ ಪಕ್ಷಕ್ಕೋ? ಇದು ಜಟಿಲವಾದ ಪ್ರಶ್ನೆ. ಪಕ್ಷವು ನಿಲ್ಲಿಸುವ ವ್ಯಕ್ತಿಗಳು ಯೋಗ್ಯರಾಗಿರದಿದ್ದರೆ ಮತದಾರರು ಏನು ಮಾಡಬೇಕು? ಯಾವ ರಾಜಕೀಯ ಪಕ್ಷದ ಉಮೇದುವಾರನೂ ಯೋಗ್ಯನಾದ ವ್ಯಕ್ತಿಯಲ್ಲವೆಂದು ತಿಳಿದು ಬಂದರೆ ಮತವನ್ನು ಚಲಾಯಿಸಲೇ ಕೂಡದೆ ಎಂಬುದು ಯೋಚಿಸಬೇಕಾದ ವಿಷಯ. ರಾಜಕೀಯ ಪಕ್ಷಗಳ ನಾಯಕರು ಗುತ್ತಿಗೆ ಗುಂಪುಗಳನ್ನು ನಿರ್ಮಿಸಿ ಕೇವಲ

ಕೈಗೊಂಬೆಗಳನ್ನೇ ಉಮೇದುವಾರರನ್ನಾಗಿ ಆಯ್ಕೆ ಮಾಡಿದರೆ ಜನರು ಏನುಮಾಡಬೇಕು? ಯಾವ ಪಕ್ಷದ ಉಮೇದುವಾರರಿಗೂ ಮತ ಹಾಕಲು ಇಷ್ಟವಿಲ್ಲದಿದ್ದರೆ ಮತದಾನವನ್ನೇ ಮಾಡ ಬಾರದೆ? ಈ ಪ್ರಶ್ನೆ ಅನೇಕ ಮತದಾರರ ಮುಂದೆ ಬಂದು ನಿಲ್ಲಬಹುದು.

ಚಾರಿತ್ರ್ಯವಿಲ್ಲದ, ಪ್ರಾಮಾಣಿಕರಲ್ಲದ, ನಂಬಿಕಸ್ಥರಲ್ಲದ, ಸಮಾಜಕ್ಕೆ ಮತ್ತು ಚುನಾವಣಾ ಕ್ಷೇತ್ರಕ್ಕೆ ಗೌರವ ತರುವಂತಹ ವ್ಯಕ್ತಿಯಲ್ಲ ಎಂಬುವ ಜನರನ್ನು ಪಕ್ಷಗಳು ಉಮೇದುವಾರರನ್ನಾಗಿ ನೇಮಿಸಿದರೆ ಮತದಾರರಿಗೆ ನಿಜವಾಗಿಯೂ ಅತೃಪ್ತಿ ಮತ್ತು ಸಿಟ್ಟು ಬರುವುದು ಸ್ವಾಭಾವಿಕ. ವ್ಯಕ್ತಿ ಎಂತಹವನೇ ಆಗಲಿ ಜನರು ವ್ಯಕ್ತಿಯ ಲೋಪಗಳನ್ನು ನೋಡದೆ ಯಾವ ರಾಜಕೀಯ ಪಕ್ಷವು ಅಧಿಕಾರದಲ್ಲಿರಬೇಕು ಎಂಬುದನ್ನು ಗಮನಿಸಿ ರಾಜಕೀಯ ಪಕ್ಷಕ್ಕಾಗಿ ಮತ ಹಾಕಬೇಕೆಂದು ಒಂದು ಅಭಿಪ್ರಾಯವಿದೆ. ಯಾವ ರಾಜಕೀಯ ಪಕ್ಷ ಆಳುವ ಸಾಮರ್ಥ್ಯವನ್ನು ಪಡೆದಿದೆ ಮತ್ತು ಯಾವ ಪಕ್ಷವು ಅಧಿಕಾರಕ್ಕೆ ಬಂದರೆ ರಾಷ್ಟ್ರಹಿತ ಸುರಕ್ಷಿತ ವಾಗಬಲ್ಲದು ಎಂಬುದನ್ನು ಆಳವಾಗಿ ಆಲೋಚಿಸಿ ಜನರು ವ್ಯಕ್ತಿಯ ಯೋಗ್ಯತೆಯನ್ನು ಗಮನಿಸದೆ ಯೋಗ್ಯ ಪಕ್ಷಕ್ಕೆ ಬೆಂಬಲ ನೀಡಬೇಕು ಎಂದು ವಾದಮಾಡುವುದುಂಟು.

ಅಲ್ಲದೆ, ಒಂದು ರಾಜಕೀಯ ಪಕ್ಷದ ಚುನಾವಣಾ ಪ್ರಣಾಳಿಕೆ ಯಲ್ಲಿ ನಂಬಿಕೆ ಇರುವುದಾದರೆ ವ್ಯಕ್ತಿ ಯಾರು ಎನ್ನುವುದನ್ನು ನೋಡಬೇಕಾಗಿಲ್ಲ; ಪಕ್ಷದ ಕಾರ್ಯಕ್ರಮಕ್ಕಾಗಿ ಬೆಂಬಲ ನೀಡ ಬೇಕೆಂದೂ ಹೇಳುವುದುಂಟು. ದೇಶದ ವಿದೇಶಾಂಗ ನೀತಿ, ಆರ್ಥಿಕ ನೀತಿ ಮತ್ತು ಪ್ರಚಲಿತ ಸಮಸ್ಯೆಗಳ ವಿಷಯದಲ್ಲಿ ವಿವಿಧ ಪಕ್ಷಗಳ ಧೋರಣೆಗಳನ್ನು ತೂಗಿನೋಡಿ ತಮಗೆ ಸರಿಬರುವ

ಪಕ್ಷಕ್ಕೆ ಮತ ಹಾಕಬಹುದು.

ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮಸ್ಯೆಗಳ ವಿಷಯದಲ್ಲಿ ರಾಜಕೀಯಪಕ್ಷಗಳು ಭಿನ್ನಾಭಿಪ್ರಾಯ ಹೊಂದಿರುವುದು ನೈಜವಾದುದು. ರಾಜ್ಯಗಳ ಗಡಿಗಳ ಬದಲಾವಣೆ, ಗೋವ ಸಮಸ್ಯೆ, ಕಾಶ್ಮೀರ ಸಮಸ್ಯೆ, ರಾಷ್ಟ್ರೀಕರಣನೀತಿ ಮೊದಲಾಗಿ ವಿವಾದಾಸ್ಪದ ವಿಷಯಗಳನ್ನು ತೆಗೆದುಕೊಂಡರೆ ಒಂದೊಂದು ರಾಜಕೀಯಪಕ್ಷ ಒಂದೊಂದು ನಿಲುವನ್ನು ತಾಳಬಹುದು. ಇದೇ ರೀತಿ ಆಹಾರ ಸಮಸ್ಯೆ, ನಿರುದ್ಯೋಗ ಸಮಸ್ಯೆ ಮೊದಲಾದ ಪ್ರಶ್ನೆಗಳನ್ನು ಬಗೆಹರಿಸುವ ವಿಷಯದಲ್ಲಿಯೂ ರಾಜಕೀಯ ಪಕ್ಷಗಳು ತಂತಮ್ಮ ಧೋರಣೆಗಳನ್ನು ಚುನಾವಣಾಪ್ರಣಾಳಿಕೆಗಳ ಮೂಲಕ ಪ್ರಚುರಪಡಿಸುತ್ತವೆ. ಆದುದರಿಂದ ಮತದಾರರು ಕೊಡುವ ಓಟು ವ್ಯಕ್ತಿಗಲ್ಲ, ಅದು ಒಂದು ಧೋರಣೆಯ ಬೆಂಬಲಕ್ಕಾಗಿ ಅಥವಾ ವಿರೋಧಕ್ಕಾಗಿ ಎಂದು ವಾದಮಾಡಲಾಗಿದೆ.

ರಾಜಕೀಯಪಕ್ಷಗಳಿಲ್ಲದೆಇಂದಿನ ಪ್ರಜಾಪ್ರಭುತ್ವದಲ್ಲಿ ಸರ್ಕಾರರಚನೆಯಾಗುವುದು ಸಾಧ್ಯವಿಲ್ಲವಾಗಿರುವಾಗ ಮತದಾರರು ರಾಜಕೀಯಪಕ್ಷಗಳಿಗಾಗಿಯೇ ಮತವನ್ನು ಹಾಕಬೇಕಾಗುವುದೆಂಬುದರಲ್ಲಿ ಅನುಮಾನವಿಲ್ಲ. ಕೇವಲ ಚುನಾವಣೆಯ ಪ್ರಣಾಳಿಕೆಗಳಿಗೆ, ಪ್ರಚಾರದ ಬಣ್ಣದ ಮಾತುಗಳಿಗೆ ಮರುಳಾಗದೆ ಯಾವ ರಾಜಕೀಯ ಪಕ್ಷವು ಉತ್ತಮ ಮುಖಂಡತ್ವವನ್ನು ಹೊಂದಿದೆ ಎಂಬುದನ್ನು ನೋಡಿ ರಾಜಕೀಯಪಕ್ಷಕ್ಕೆ ಬೆಂಬಲ ನೀಡಬೇಕು. ಯಾವ ರಾಜಕೀಯಪಕ್ಷವೂ ಯೋಗ್ಯವಲ್ಲವೆನಿಸಿದರೆ ಕುರುಡುಗಣ್ಣಿಗಿಂತ ಮೆಳ್ಳೆಗಣ್ಣು ವಾಸಿ ಎನ್ನುವಂತೆ ಇದ್ದ ಪಕ್ಷಗಳಲ್ಲಿಯೇ ಉತ್ತಮವಾದದ್ದನ್ನು ಚುನಾಯಿಸಬೇಕು.

ಹಾಗಾದರೆ ವ್ಯಕ್ತಿಗಳ ಪ್ರಾಮಾಣಿಕತೆ, ಚಾರಿತ್ರ್ಯ ಮೊದಲಾದ

ವುಗಳನ್ನು ಕಡೆಗಣಿಸಬೇಕೆಂದಲ್ಲ.ರಾಜಕೀಯ ಪಕ್ಷವೆಂದು ಕಣ್ಣು ಮುಚ್ಚಿಕೊಂಡು, ಪಕ್ಷ ನಿಲ್ಲಿಸಿದ ಎಂತಹ ಮುಠ್ಠಾಳನಿಗಾದರೂ ಮತ ಹಾಕುವುದು ವಿವೇಕವಲ್ಲವೆಂದು ಶ್ರೀ ಸಿ. ರಾಜಗೋಪಾಲಾ ಚಾರಿ ಮತ್ತು ಶ್ರೀ ವಿನೋಬಾಭಾವೆ ಅವರು ಅಭಿಪ್ರಾಯ ಪಟ್ಟಿದ್ದಾರೆ. ಮಹಾತ್ಮ ಗಾಂಧಿಯವರು ವ್ಯಕ್ತಿಯ ಗುಣಕ್ಕೆ ಬೆಲೆ ಕೊಡಬೇಕೆಂದು ಪ್ರತಿಪಾದಿಸಿದ್ದಾರೆ. ಸಂಸ್ಥೆಯ ಹೆಸರಿನಲ್ಲಿ ಎಂತಹ ಅಯೋಗ್ಯರಿಗಾದರೂ ಪುರಸ್ಕಾರ ಸಿಕ್ಕುವುದು ಧರ್ಮವಲ್ಲ ವೆಂದು ಇನ್ನೂ ಕೆಲವರು ವಾದಿಸಿದ್ದಾರೆ.

ಭಾರತದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಸ್ವರಾಜ್ಯಕ್ಕಾಗಿ ಹೋರಾ ಡುವ ದೇಶಭಕ್ತರು ಎಂಬ ಒಂದೇ ದೃಷ್ಟಿಯಿಂದ ಜನರು ಕಾಂಗ್ರೆಸ್ ಸಂಸ್ಥೆಗೆ ಸಂಪೂರ್ಣ ಬೆಂಬಲ ನೀಡಿದರು. ಸ್ವರಾಜ್ಯ ಬಂದ ಮೇಲೆ ಕಾಂಗ್ರೆಸ್ಸಿನಲ್ಲಿದ್ದ ಅನೇಕರು ಬೇರೆ ಬೇರೆ ರಾಜ ಕೀಯ ಪಕ್ಷಗಳನ್ನು ಸ್ಥಾಪಿಸಿದರು. ಸ್ವತಂತ್ರ ಭಾರತದಲ್ಲಿ ಇಂದು ಅನೇಕ ರಾಜಕೀಯ ಪಕ್ಷಗಳಿವೆ. ಜನರು ಮತದಾನ ಮಾಡುವಾಗ ಕೆಲವು ಅಂಶಗಳನ್ನು ಗಮನಿಸಬೇಕು. ವ್ಯಕ್ತಿಯೇ ಆಗಲಿ ಪಕ್ಷವೇ ಆಗಲಿ ಕೇವಲ ವಾಗ್ದಾನಗಳಿಗೆ ಮಾರು ಹೋಗದೆ ಅವರ ಕೃತಿಗಳಿಂದ ಅವರ ಬೆಲೆ ಕಟ್ಟಬೇಕು. ರಾಜ ಕೀಯ ಪಕ್ಷಕ್ಕೆ ಮತ ಕೊಡುವುದು ಪ್ರಮುಖ ಜವಾಬ್ದಾರಿ ಯಾದರೂ ಶೀಲವಿಲ್ಲದ ಚಾರಿತ್ರ್ಯವಿಹೀನ ವ್ಯಕ್ತಿಗಳಿಗೆ ಬೆಂಬಲ ಕೊಡಬಾರದು. ನಮ್ಮ ದೇಶದಲ್ಲಿ ಯಾವ ರಾಜ ಕೀಯ ಪಕ್ಷಕ್ಕೂ ಸೇರದ ಸ್ವತಂತ್ರರು ಹೆಚ್ಚಾಗಿ ನಿಲ್ಲುತ್ತಾರೆ. ಪ್ರಜಾಪ್ರಭುತ್ವದಲ್ಲಿ ಭದ್ರವಾದ ಸರ್ಕಾರ ರಚಿಸಲು ಇದು ಸಹಾ ಯಕವಾಗುವುದಿಲ್ಲ. ಆದರೂ ಅಸಾಧಾರಣ ವ್ಯಕ್ತಿತ್ವವುಳ್ಳ ಪ್ರಾಮಾಣಿಕ ಮತ್ತು ಯೋಗ್ಯ ವ್ಯಕ್ತಿಗಳನ್ನು ಚುನಾಯಿಸುವುದ

ರಿಂದ ಶಾಸನಸಭೆಯ ಬೆಲೆ ಹೆಚ್ಚುವುದರಲ್ಲಿ ಸಂದೇಹವಿಲ್ಲ. ವಿರೋಧ ಪಕ್ಷದ ಪರವಾಗಿ ಮತ್ತು ಸ್ವತಂತ್ರವಾಗಿ ಸ್ಪರ್ಧಿಸುವ ಕೆಲವ ರಾದರೂ ಪ್ರತಿಭಾಶಾಲಿಗಳು ಚುನಾಯಿತರಾದರೆ ಅವರ ನಿರ್ಭಯ ಟೀಕೆಗಳಿಂದ ಸರ್ಕಾರೀ ಆಡಳಿತಕ್ಕೆ ಅನುಕೂಲವೇ ಆಗುವುದೆಂದು ಹೇಳಬಹುದು. ನಿಮಗೆ ಯಾರು ಪ್ರೀತಿಪಾತ್ರರು-ತಂದೆ ತಾಯಿ ಗಳೋ ಅಕ್ಕತಂಗಿಯರೋ ಅಥವಾ ಪತ್ನಿಯೋ ಎಂದು ಕೇಳಿದರೆ ಕೇವಲ ಯಾರೊಬ್ಬರ ಹೆಸರನ್ನೂ ಹೇಳಲಾಗುವುದಿಲ್ಲ. ಎಲ್ಲ ರನ್ನೂ ಒಂದೊಂದು ದೃಷ್ಟಿಯಿಂದ ಪ್ರೀತಿಸುವಂತೆ ಮತದಾರರು ಕೂಡ ಕೇವಲ ವ್ಯಕ್ತಿಗಾಗಲೀ ಅಥವಾ ರಾಜಕೀಯ ಪಕ್ಷಕ್ಕಾಗಲೀ ಬೆಂಬಲ ಕೊಡಲು ಸಾಧ್ಯವಿಲ್ಲ. ರಾಜಕೀಯ ಪಕ್ಷದ ಯೋಗ್ಯತೆ ಮತ್ತು ವ್ಯಕ್ತಿಯ ನಡತೆ, ಎರಡನ್ನೂ ಪರಿಗಣಿಸಿ ಯೋಗ್ಯ ಪಕ್ಷ ವನ್ನೂ ಯೋಗ್ಯ ಉಮೇದುವಾರರನ್ನೂ ಚುನಾಯಿಸಿ ಕಳುಹಿಸು ವುದು ಆದರ್ಶವೆಂದು ಮತದಾರರು ಭಾವಿಸಿ ಅದರಂತೆ ಆಚರಿಸ ಬೇಕು.

೭

## ಪ್ರಥಮ ಮಹಾಚುನಾವಣೆಗಳು

### (೧೯೫೧-೫೨)

ಸ್ವತಂತ್ರ ಭಾರತದ ರಾಷ್ಟ್ರೀಯ ಚುನಾವಣೆಗಳು ಭಾರತದ ಚರಿತ್ರೆಯಲ್ಲಿ ಮಾತ್ರವಲ್ಲ ಪ್ರಪಂಚದ ಚರಿತ್ರೆಯಲ್ಲಿಯೇ ಅಪೂರ್ವ ವಾದವು. ೧೯೫೧ ರ ಮುನ್ನ ಕೇವಲ ಶೇ|| ೧೪ ರಷ್ಟು ವಯಸ್ಕರು ಮತದ ಹಕ್ಕನ್ನು ಪಡೆದಿದ್ದರು. ೧೯೫೧-೫೨ರ ಚುನಾವಣೆಗಳಲ್ಲಿ ಕೋಟಿ ಕೋಟಿ ಜನ ಭಾಗವಹಿಸಿದ್ದರು. ವಯಸ್ಕರ ಮತದ

ಆಧಾರದ ಮೇಲೆ ತಯಾರಾದ ಮತದಾರರ ಪಟ್ಟಿಯು ಅನೇಕ ಗ್ರಂಥರಾಶಿಗಳನ್ನು ಪ್ರಕಟಿಸುವಷ್ಟು ದೊಡ್ಡದಾಗಿದೆ.

೧೭ ಕೋಟಿಗೆ ಮೇಲ್ಪಟ್ಟು ವಯಸ್ಕರು ಭಾರತೀಯ ಮತದಾರರೆಂದು ಪರಿಗಣಿತರಾಗಿದ್ದರು. ಪ್ರಪಂಚದ ಯಾವ ಪ್ರಜಾಪ್ರಭುತ್ವ ರಾಜ್ಯದಲ್ಲಿಯೂ ಇಷ್ಟು ಅಧಿಕ ಜನ ಜಂಗುಳಿ ಮತದ ಹಕ್ಕನ್ನು ಹೊಂದಿಲ್ಲ. ೧೯೫೧–೫೨ ರ ಚುನಾವಣೆಗಳು ಭಾರತದ ಚರಿತ್ರೆಯಲ್ಲಿ ಸಂಸ್ಮರಣೀಯವಾಗಿವೆ. ಚುನಾವಣೆಗೆ ನಿಂತ ಸ್ಪರ್ಧಿಗಳು ಮತ್ತು ಅವರ ಹಿಂಬಾಲಕರು, ಹಿತೈಷಿಗಳು ಖರ್ಚುಮಾಡಿದ ಲೆಕ್ಕವನ್ನು ಬಿಟ್ಟು ಚುನಾವಣೆ ನಡೆಸುವುದಕ್ಕಾಗಿಯೇ ಸರ್ಕಾರದವರಿಗೆ ೧೦ಕೋಟಿ ರೂಪಾಯಿಗಳಿಗಿಂತಲೂ ಹೆಚ್ಚು ಹಣ ವೆಚ್ಚವಾಯಿತೆಂದರೆ ಚುನಾವಣೆಗಳ ಬಗ್ಗೆ ತಕ್ಕ ಕಲ್ಪನೆಯಾಗಬಹುದು.

ದೇಶದ ವಿಸ್ತೀರ್ಣ ಮತ್ತು ಮತದಾರರ ಸಂಖ್ಯೆಯನ್ನು ನೆನಪಿನಲ್ಲಿಟ್ಟುಕೊಂಡು ಮಹಾಚುನಾವಣೆಗಳನ್ನು ನಡೆಸಲು ಚುನಾವಣಾ ಕಮಿಷನ್ನಿನವರು ಸೂಕ್ತ ಏರ್ಪಾಟುಮಾಡಿದ್ದರು. ವಯಸ್ಕ ಮತದ ಪದ್ಧತಿಯ ಪ್ರಕಾರ ಚುನಾವಣೆ ನಡೆಯಬೇಕಾಗಿತ್ತು. ಮೊದಲಬಾರಿ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಚುನಾವಣೆ ನಡೆಸಬೇಕಾಗಿತ್ತು. ದೇಶದ ವಿವಿಧ ಭಾಗಗಳಲ್ಲಿ ಒಟ್ಟು ನಾಲ್ಕು ತಿಂಗಳುಕಾಲ ಚುನಾವಣೆ ನಡೆದುವು.

ಕೇಂದ್ರ ಮತ್ತು ರಾಜ್ಯಗಳ ಶಾಸನ ಸಭೆಗಳ ಒಟ್ಟು ೩೮೭೨ ಸ್ಥಾನಗಳಿಗೆ ಚುನಾವಣೆ ನಡೆದವು. ೨೭,೧೨೦ ಉಮೇದುವಾರರು ನಾಮಪತ್ರಗಳನ್ನು ಸಲ್ಲಿಸಿದ್ದರು. ಇವುಗಳಲ್ಲಿ ೧೫೩೮ ನಾಮ ಪತ್ರಗಳು ತಿರಸ್ಕೃತವಾದವು ಮತ್ತು ೭,೩೪೭ ಉಮೇದುವಾರರು ಉಮೇದುವಾರಿಕೆಯನ್ನು ಹಿಂತೆಗೆದುಕೊಂಡರು. ಒಟ್ಟನಲ್ಲಿ ೧೭೫೦೦ ಜನ ಸ್ಪರ್ಧಿಸಿದ್ದರು. ಒಂದು ಸ್ಥಾನಕ್ಕೆ ಸರಾಸರಿ ೫ಜನರು

ಸ್ಪರ್ಧಿಸಿದ್ದರು. ಪಾರ್ಲಿಮೆಂಟಿನ ಲೋಕಸಭೆಗೆ ೪೯೭ ಸ್ಥಾನಗಳಿಗೆ ೧೮೭೪ ಜನ ಸ್ಪರ್ಧಿಸಿದ್ದರು. ರಾಜ್ಯ ಶಾಸನ ಸಭೆಗಳ ೩,೨೮೩ ಸ್ಥಾನಗಳಿಗೆ ೧೫,೬೨೬ ಹುರಿಯಾಳುಗಳು ಸ್ಪರ್ಧಿಸಿದ್ದರು.

ಅಂದಿನ ಮತದಾರರ ಸಂಖ್ಯೆ ೧೭,೩೨,೧೩,೬೩೫. ಇವರಲ್ಲಿ ಎಲ್ಲರೂ ಮತವನ್ನು ಚಲಾಯಿಸಲಿಲ್ಲ. ಶೇ|| ೫೧.೧೫ ರಷ್ಟು ಮತದಾರರು ಚುನಾವಣೆಯಲ್ಲಿ ಭಾಗವಹಿಸಿ ಮತ ಕೊಟ್ಟರು. ಕೆಲವು ಕ್ಷೇತ್ರಗಳಲ್ಲಿ ಶೇ|| ೮೦ರಷ್ಟು ಜನ ಮತದಾನ ಮಾಡಿದರು. ಭಾರತದಲ್ಲಿ ಒಟ್ಟಿನಲ್ಲಿ ನೂರಕ್ಕೆ ಐವತ್ತು ಜನ ಮತ ಚಲಾಯಿಸಿದರು.

೨೫,೮೪,೯೪೫ ಮತಪೆಟ್ಟಿಗೆಗಳನ್ನು ಉಪಯೋಗಿಸಲಾಯಿತು. ೧೦ ಲಕ್ಷರೂಪಾಯಿ ವೆಚ್ಚದಲ್ಲಿ ೬೦೦ ದಶಲಕ್ಷ ಮತಚೀಟಿಗಳನ್ನು ಮುದ್ರಿಸಲಾಗಿತ್ತು. ಚುನಾವಣಾ ಕಮಿಷನ್ನಿನವರು ಎಚ್ಚರಿಕೆ ವಹಿಸಿ ಅನೇಕ ಸೂಕ್ತ ಏರ್ಪಾಡುಗಳನ್ನು ಮಾಡಿದ್ದರು. ಓಟು ಮಾಡಿದವರೇ ಮತ್ತೆ ಓಟು ಮಾಡುವುದನ್ನು ತಪ್ಪಿಸಲು ಕೈಗೆ ಮಸಿ ಹಚ್ಚುವ ವ್ಯವಸ್ಥೆಯನ್ನು ಮಾಡಿದ್ದರು. ಈ ಮಸಿಗಾಗಿಯೇ ಎರಡು ಲಕ್ಷ ರೂಪಾಯಿ ಖರ್ಚಾಯಿತು.

ಚುನಾವಣೆಗಳಲ್ಲಿ ಅನೇಕ ಅಖಿಲ ಭಾರತ ರಾಜಕೀಯ ಪಕ್ಷಗಳೂ, ಸ್ಥಳೀಯ ಪಕ್ಷ ಪಂಗಡಗಳೂ ಭಾಗವಹಿಸಿದ್ದವು. ಅಖಿಲ ಭಾರತ ರಾಜಕೀಯ ಪಕ್ಷಗಳಲ್ಲಿ ಕಾಂಗ್ರೆಸ್, ಸೋಷಿಯಲಿಸ್ಟ್, ಕಮ್ಯುನಿಸ್ಟ್ ಮತ್ತು ಜನಸಂಘಗಳು ಮುಖ್ಯವಾದುವು. ಒಟ್ಟು ಹದಿನಾಲ್ಕು ರಾಷ್ಟ್ರೀಯ ವ್ಯಾಪ್ತಿಯುಳ್ಳ ರಾಜಕೀಯ ಪಕ್ಷಗಳು ಸ್ಪರ್ಧಿಸಿದ್ದವು. ಕಾಂಗ್ರೆಸ್ ೩,೬೭೧ ಸ್ಥಾನಗಳಿಗೂ ಪ್ರಜಾಸೋಷಿಯಲಿಸ್ಟ್ ಪಕ್ಷವು ೨,೦೫೮ ಸ್ಥಾನಗಳಿಗೂ, ಕಮ್ಯುನಿಸ್ಟ್ ಪಕ್ಷವು ೫೧೪ ಸ್ಥಾನಗಳಿಗೂ ಉಮೇದುವಾರರನ್ನು ನಿಲ್ಲಿಸಿದ್ದವು.

## ಲೋಕಸಭೆಗೆ ಚುನಾವಣೆಗಳು (೧೯೫೧–೫೨)

| ಪಕ್ಷಗಳು | ಗಳಿಸಿದ ಮತಗಳ ಸಂಖ್ಯೆ | ಶೇಕಡ ಗಳಿಸಿದ ಮತಗಳ ಸಂಖ್ಯೆ | ಗೆದ್ದ ಸ್ಥಾನಗಳು | ಸ್ಪರ್ಧಿಸಿದ ಸ್ಥಾನಗಳ ಸಂಖ್ಯೆ |
|---|---|---|---|---|
| ಕಾಂಗ್ರೆಸ್ | ೪೭,೭೧೧,೧೮೫ | ೪೫.೦೧ | ೩೬೪ | ೪೭೯ |
| ಸೋಷಿಯಲಿಸ್ಟ್ | ೧೧,೧೨೬,೩೪೪ | ೧೦.೫ | ೧೨ | ೨೫೫ |
| ಕೆ.ಎಂ.ಪಿ.ಪಿ. | ೬,೨೨೬,೬೦೬ | ೫.೮೭ | ೧೦ | ೧೪೭ |
| ಕಮ್ಯೂನಿಸ್ಟ್ | ೫,೩೭೦,೩೬೧ | ೫.೦೬ | ೨೬ | ೬೩ |
| ಜನಸಂಘ | ೩,೨೩೬,೩೬೧ | ೩.೦೫ | ೩ | ೯೩ |
| ಪರಿಶಿಷ್ಟವರ್ಗ ಸಂಘ (S.C.F.) | ೨,೫೦೧,೯೬೪ | ೨.೩೦ | ೨ | ೩೪ |
| ರಾಮರಾಜ್ಯ ಪರಿಷತ್ (R.R.P.) | ೨,೦೯೪,೮೧೧ | ೧.೯೮ | ೩ | ೬೨ |
| ಕೃಷಿಕಾರ್ ಲೋಕಪಕ್ಷ (K.L.P.) | ೧,೪೮೯,೪೮೮ | ೧.೪೦ | ೧ | ೨೯ |
| ಅಕಾಲಿದಳ | ೧,೧೧೪,೭೨೩ | ೧.೧ | ೪ | — |
| ರೈತ ಕೆಲಸಗಾರರ ಪಕ್ಷ (P.W.P.) | ೧,೧೦೯,೫೬೯ | ೧.೧ | ೨ | ೧೬ |
| ಹಿಂದೂ ಮಹಾಸಭೆ | ೧,೦೪೬,೨೬೩ | ೦.೯೧ | ೪ | ೩೧ |
| ಫಾರ್ವರ್ಡ್ ಬ್ಲಾಕ್ | ೯೮೮,೨೭೨ | ೦.೯೦ | ೧ | ೨೪ |
| ಗಣತಂತ್ರ ಪರಿಷತ್ | ೯೬೬,೯೭೨ | ೦.೯೦ | ೫ | — |

## ವಿಧಾನಸಭೆಗಳಿಗೆ ಚುನಾವಣೆಗಳು (೧೯೫೧-೫೨)

| ಪಕ್ಷಗಳು | ಗಳಿಸಿದ ಮತಗಳ ಸಂಖ್ಯೆ | ಶೇಕಡ ಗಳಿಸಿದ ಮತಗಳ ಸಂಖ್ಯೆ | ಗೆದ್ದ ಸ್ಥಾನಗಳು | ಸ್ಪರ್ಧಿಸಿದ ಸ್ಥಾನಗಳ ಸಂಖ್ಯೆ |
|---|---|---|---|---|
| ಕಾಂಗ್ರೆಸ್ | ೪೩,೯೬೭,೯೪೨ | ೪೨.೩೬ | ೨೨೪೭ | ೩,೨೦೫ |
| ಸೋಷಿಯಲಿಸ್ಟ್ | ೧೦,೧೦೬,೧೩೬ | ೯.೭೩ | ೧೨೮ | ೧,೮೦೫ |
| ಕೆ. ಎಂ. ಪಿ. ಪಿ. | ೫,೨೯೧,೭೭೭ | ೫.೧೦ | ೭೭ | ೧,೦೦೫ |
| ಕಮ್ಯೂನಿಸ್ಟ್ | ೬,೦೬೨,೯೪೩ | ೫.೮೪ | ೧೭೩ | ೫೬೩ |
| ಜನಸಂಘ | ೨,೯೧೭,೮೩೦ | ೨.೮೧ | ೩೩ | ೭೪೨ |
| ಪರಿಶಿಷ್ಟವರ್ಗ ಸಂಘ | ೧,೮೦೮,೭೪೨ | ೧.೭೪ | ೧೨ | ೨೪೧ |
| ರಾಮರಾಜ್ಯ ಪರಿಷತ್ | ೧,೨೬೨,೧೩೫ | ೧.೨೧ | ೩೨ | ೩೪೨ |
| ಕೃಷಿಕಾರ ಲೋಕಪಕ್ಷ | ೧,೧೨೬,೨೮೮ | ೧.೦೭ | ೨೩ | ೧೩೯ |
| ಅಕಾಲಿದಳ | ೯೮೧,೨೦೩ | ೦.೮೯ | ೩೩ | — |
| ರೈತ ಕೆಲಸಗಾರರ ಪಕ್ಷ | ೧,೦೨೭,೯೯೩ | ೦.೯೫ | ೨೫ | ೧೧೯ |
| ಹಿಂದೂ ಮಹಾಸಭೆ | ೮೫೮,೮೯೫ | ೦.೮೩ | ೨೦ | ೨೧೧ |
| ಫಾರ್ವರ್ಡ್ ಬ್ಲಾಕ್ | ೮೫೩,೮೧೦ | ೦.೮೨ | ೧೮ | ೧೫೮ |
| ಗಣತಂತ್ರ ಪರಿಷತ್ | ೭೬೭,೯೯೨ | ೦.೭೨ | ೩೨ | — |

ಚುನಾವಣೆಗಳನ್ನು ನಡೆಸಲು ಸಮರ್ಪಕವಾದ ವ್ಯವಸ್ಥೆ ಮಾಡಲಾಗಿತ್ತು. ಚುನಾವಣಾಧಿಕಾರಿಗಳಿಗೆ ಸಹಾಯಕವಾಗಿ ಪೋಲೀಸ್ ದಳಗಳನ್ನು ಒದಗಿಸಲಾಗಿತ್ತು. ಕೆಲವು ಕಡೆ ಅಲ್ಲಲ್ಲಿ ಸಣ್ಣಪುಟ್ಟ ಗಲಭೆಗಳಾದರೂ ಒಟ್ಟನಲ್ಲಿ ಚುನಾವಣೆಗಳು ಶಾಂತವಾಗಿ ನಡೆದವು. ಒಟ್ಟು ೮೮೬ಲಕ್ಷ ಮತದಾರರು ಮತ ಚಲಾಯಿಸಿದರೆಂಬುದನ್ನು ನೆನೆದರೆ ಅಲ್ಲಲ್ಲಿ ಸಣ್ಣ ಪುಟ್ಟ ಗಲಭೆ ನಡೆದದ್ದು ಆಶ್ಚರ್ಯವೇನಲ್ಲ. ಜನತೆ ಶಾಂತಿಯಿಂದಲೂ ಕಾನೂನು ಸುವ್ಯವಸ್ಥೆಗಳಿಗೆ ಭಂಗಬಾರದಂತೆಯೂ ವರ್ತಿಸಿದ್ದು ಹೆಮ್ಮೆಯ ವಿಷಯ.

ಮತದಾರರು ಉತ್ಸಾಹದಿಂದ ಮತ ಚಲಾಯಿಸಿದರು. ಪಶ್ಚಿಮ ಬಂಗಾಳದ ಮತಕೇಂದ್ರ ಒಂದರಲ್ಲಿ ೧,೩೬೬ ಮತದಾರರಿದ್ದು ೧,೩೬೧ ಜನ ಓಟು ಮಾಡಿದರು. ಇಡೀ ಭಾರತದಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಮತದಾನವಾದದ್ದು ಈ ಸ್ಥಳದಲ್ಲಿಯೇ. ಮದ್ರಾಸಿನ ವೆಂಕಟರಾಮಾನುಜಪುರಂ ಎಂಬ ಕೇಂದ್ರದಲ್ಲಿ ೧,೪೭೬ ಮತದಾರರಿದ್ದರೂ, ಕೇವಲ ಒಬ್ಬ ಓಟುಮಾಡಿದನು.

೧೯೫೧–೫೨ರ ಮಹಾಚುನಾವಣೆಗಳಲ್ಲಿ ಹಿಂದಿನ ಪುಟಗಳಲ್ಲಿ ಕಂಡಂತೆ ಮತದಾರರು ತಮ್ಮ ಮತವನ್ನು ಚಲಾಯಿಸಿದರು.

೧೯೫೧–೫೨ ರ ಮಹಾಚುನಾವಣೆಗಳ ಫಲಿತಾಂಶವನ್ನು ಪರಿಶೀಲಿಸಿದರೆ ಕೆಲವು ಸ್ವಾರಸ್ಯವಾದ ಅಂಕಿಅಂಶಗಳು ಹೊರಬೀಳುವುವು. ಅನೇಕ ಕಡೆಗಳಲ್ಲಿ ಕಾಂಗ್ರೆಸ್ ಪಕ್ಷಕ್ಕೂ ವಿರೋಧ ಪಕ್ಷಗಳಿಗೂ ನೇರವಾದ ಸ್ಪರ್ಧೆ ನಡೆಯದೆ ಸಿಕ್ಕಾಪಟ್ಟೆ ಜನ ಸ್ಪರ್ಧಿಸಿದ್ದರು. ವಿಧಾನ ಸಭೆಗಳ ಒಟ್ಟು ೩,೮೬೨ ಸ್ಥಾನಗಳಿಗೆ ೧೭,೫೦೦ ಉಮೇದುವಾರರು ಸ್ಪರ್ಧಿಸಿದ್ದರು. ಎಂದರೆ ಪ್ರತಿ ಒಂದು ಸ್ಥಾನಕ್ಕೆ ಸರಾಸರಿ ಐದು ಜನ ಸ್ಪರ್ಧಿಸಿದ್ದರು. ಬಹಳ ಜನ ಸ್ವತಂತ್ರರು ಸ್ಪರ್ಧಿಸಿದ್ದರು. ಚುನಾವಣೆಗೆ ನಿಂತು ಠೇವಣಿ ಕಳೆದು

ಕೊಂಡು ಸೋತವರಲ್ಲಿ ಸ್ವತಂತ್ರರೇ ಅಧಿಕಸಂಖ್ಯಾತರು. ಲೋಕ ಸಭೆಗೆ ನಿಂತವರ ಪೈಕಿ ೭೪೮ ಉಮೇದುವಾರರು ಠೇವಣಿ ಕಳೆದು ಕೊಂಡರು. ಇವರಲ್ಲಿ ೩೪೯ ಜನ ಸ್ವತಂತ್ರರು. ವಿಧಾನ ಸಭೆ ಗಳಿಗೆ ನಿಂತವರಲ್ಲಿ ೮,೪೫೦ ಉಮೇದುವಾರರು ಠೇವಣಿ ಕಳೆದು ಕೊಂಡರು. ಇವರಲ್ಲಿ ೪,೬೧೮ ಎಂದರೆ ಶೇ|| ೫೪ ರಷ್ಟು ಜನ ಸ್ವತಂತ್ರರು. ಇದರಿಂದ ಸ್ವತಂತ್ರರು ಚುನಾವಣೆಯ ಮುಂದಿನ ಆಗುಹೋಗುಗಳನ್ನು ಸರಿಯಾಗಿ ಗಮನಿಸದೆ ಸ್ಪರ್ಧಿಸಿದ್ದರೆಂದು ವೇದ್ಯವಾಗುತ್ತದೆ.

ಲೋಕಸಭೆಯ ಚುನಾವಣೆಗಳಲ್ಲಿ ಕಾಂಗ್ರೆಸ್ ಶೇ|| ೪೫ರಷ್ಟು ಮತಗಳನ್ನು ಪಡೆದು ಶೇ|| ೭೪.೫ ರಷ್ಟು ಸ್ಥಾನಗಳನ್ನು ಗಳಿಸಿತು. ಸೋಷಿಯಲಿಸ್ಟ್ ಪಕ್ಷ ಮತ್ತು ಕೆ.ಎಂ.ಪಿ. ಪಕ್ಷಗಳು ಒಟ್ಟು ಶೇ|| ೧೬.೪ರಷ್ಟು ಸ್ಥಾನಗಳನ್ನು ಗಳಿಸಿದವು. ಕಮ್ಯೂನಿಸ್ಟ್ ಪಕ್ಷವು ಶೇ|| ೩.೨ ರಷ್ಟು ಸ್ಥಾನಗಳನ್ನು ಗಳಿಸಿತು.

ಕಾಂಗ್ರೆಸ್ ಪಕ್ಷವು ಸೌರಾಷ್ಟ್ರವೊಂದರಲ್ಲಿ ಬಿಟ್ಟು ಬೇರೆ ಯಾವ ರಾಜ್ಯದಲ್ಲಿಯೂ ಶೇ|| ೫೦ ಕ್ಕಿಂತ ಹೆಚ್ಚಿನ ಮತಗಳನ್ನು ದೊರಕಿಸ ಲಿಲ್ಲ. ವಿರೋಧ ಪಕ್ಷಗಳಲ್ಲಿ ಸರಿಯಾದ ಮೈತ್ರಿಯಿಲ್ಲದಿದ್ದುದರಿಂದಲೂ, ಅನೇಕ ಸ್ವತಂತ್ರರು ಯಾವ ಶಿಸ್ತಿಗೂ ಒಳಗಾಗದೆ ಅಧಿಕ ಸಂಖ್ಯೆಯಲ್ಲಿ ಸ್ಪರ್ಧಿಸಿದ್ದುದರಿಂದಲೂ, ಕಾಂಗ್ರೆಸ್ಸಿನ ವಿಜಯವು ಸುಲಭವಾಯಿತು. ಒಟ್ಟಿನಲ್ಲಿ ಕಾಂಗ್ರೆಸ್ಸಿಗೆ ಶಾಸನಸಭೆ ಗಳಲ್ಲಿ ಬಹುಮತ ದೊರೆತರೂ ಅನೇಕ ರಾಜ್ಯಗಳಲ್ಲಿ ಅನೇಕ ಮಂತ್ರಿಗಳು ಪರಾಭವಗೊಂಡರು. ಜನತೆ ಚಾರಿತ್ರ್ಯವಿಹೀನರನ್ನು ತಿರಸ್ಕರಿಸಬಲ್ಲುದು ಎಂಬುದು ಇದರಿಂದ ಸ್ಪಷ್ಟವಾಯಿತು. ಪ್ರಜಾಪ್ರಭುತ್ವದ ಬೆಳವಣಿಗೆಗೆ ಇದು ಆಶಾದಾಯಕ.

ತಿರುವಾಂಕೂರು-ಕೊಚ್ಚಿ ರಾಜ್ಯದಲ್ಲಿ ಶೇ|| ೭೧ ರಷ್ಟು ಮತ

ದಾರರೂ ಹಿಮಾಚಲ ಪ್ರದೇಶದಲ್ಲಿ ಶೇ|| ೨೫ರಷ್ಟು ಮತದಾರರೂ ಮತಗಳನ್ನು ಚಲಾಯಿಸಿದರು. ಇತರ ಕಡೆ ಸ್ವಲ್ಪ ಹೆಚ್ಚು ಕಡಮೆ ಶೇ|| ೫೦ ರಷ್ಟು ಮತದಾರರು ಮತದಾನ ಮಾಡಿದರು. ಮೈಸೂರಿನಲ್ಲಿ ಶೇ|| ೫೧ ರಷ್ಟು ಮತದಾರರು ಮತ ಹಾಕಿದರು.

೧೯೫೧–೫೨ ರ ಮಹಾಚುನಾವಣೆಗಳು ಅನೇಕ ದೃಷ್ಟಿಯಿಂದ ಬಹುಮಟ್ಟಿಗೆ ಯಶಸ್ವಿಯಾದವೆಂದು ಹೇಳಬಹುದಾದರೂ ಕೆಲವು ಲೋಪದೋಷಗಳು ಚುನಾವಣೆಯ ಕಾಲದಲ್ಲಿ ಕಂಡುಬಂದುವು. ಬಹುಮಂದಿ ಮತದಾರರು ರಾಜಕೀಯ ಪಕ್ಷಗಳನ್ನೂ ಅವುಗಳ ಧ್ಯೇಯ-ಧೋರಣೆಗಳನ್ನೂ ತಿಳಿದುಕೊಂಡಿರಲಿಲ್ಲ. ಜನತೆಯ ಅಜ್ಞಾನವನ್ನು ಕೆಲವರು ಉಪಯೋಗಿಸಿಕೊಂಡರು. ಗುಂಪು, ಜಾತಿ, ಒಳಪಂಗಡಗಳ ಭಾವನೆಗಳಿಂದ ಪ್ರೇರಿತರಾಗಿ ಜನ ಮತ ಹಾಕಿದರು. ಜೊತೆಗೆ ವ್ಯಕ್ತಿಗಳ ಘರ್ಷಣೆ ಚುನಾವಣೆಗಳ ಮೇಲೆ ಪ್ರಭಾವ ಬೀರದಿರಲಿಲ್ಲ. ೧೯೫೧–೫೨ ರ ಮಹಾಚುನಾವಣೆಗಳನ್ನು ಕುರಿತು ಪುಣೆ ವಿಶ್ವವಿದ್ಯಾನಿಲಯದ ಫರ್ಗೂಸನ್ ಕಾಲೇಜಿನ ಶ್ರೀ ಎಸ್. ವಿ. ಕೋಗೇಕರ್ ಅವರು ತಮ್ಮ ಸಹೋದ್ಯೋಗಿಗಳೊಂದಿಗೆ ಒಂದು ವರದಿಯನ್ನು ಸಿದ್ಧಪಡಿಸಿ, ಹಲವಾರು ಅಂಕಿ ಅಂಶಗಳನ್ನು ಹೊರಗೆಡವಿದ್ದಾರೆ. ಚುನಾವಣೆಗಳು ಮತೀಯ ಆಧಾರದ ಮೇಲೆ ನಡೆದವು ಎಂಬುದಕ್ಕೆ ಅನೇಕ ದೃಷ್ಟಾಂತಗಳನ್ನು ಕೊಟ್ಟಿದ್ದಾರೆ. ಬಿಹಾರದಲ್ಲಿ ಕಾಯಸ್ಥರಿಗೂ, ರಜಪೂತರಿಗೂ ಸ್ಪರ್ಧೆ ನಡೆಯಿತು. ಕಾಯಸ್ಥರಿಗೆ ಭೂಮಿಹಾರ್ ಬ್ರಾಹ್ಮಣರ, ರಜಪೂತರಿಗೆ ಮೈಥಿಲಿ ಬ್ರಾಹ್ಮಣರ ಬೆಂಬಲವಿತ್ತು. ಮಹಾರಾಷ್ಟ್ರದಲ್ಲಿ ರೈತ ಕೂಲಿಕಾರ ಪಕ್ಷವು ಬ್ರಾಹ್ಮಣ ವಿರೋಧಿ ಪಕ್ಷವಾಗಿ ಕೆಲಸ ಮಾಡಿತು. ಕೇರಳದಲ್ಲಿ ಹಿಂದೂ–ಕ್ರೈಸ್ತಮತದವರ ಜಾತೀಯತೆ ಚುನಾವಣೆಗಳ

ಮೇಲೆ ಪರಿಣಾಮ ಮಾಡಿತು. ಭಾರತದ ಅನೇಕ ಕಡೆಗಳಲ್ಲಿ ಹೀಗೆ ಕೋಮುವಾರು ಆಧಾರಗಳ ಮೇಲೆ ಮತದಾನ ನಡೆಯಿತು.

ಜನರು ರಾಜಕೀಯ ಪಕ್ಷಗಳ ಚುನಾವಣಾ ಪ್ರಣಾಳಿಕೆಗಳಿಗೆ ಮತ ಕೊಡದೆ ವ್ಯಕ್ತಿಗಳಿಗೆ ಬೆಂಬಲವಿತ್ತರು. ಹಣ ಮತ್ತು ಸ್ಥಳೀಯ ಪ್ರಭಾವದಿಂದ ಅನೇಕರು ಚುನಾವಣೆಗಳಲ್ಲಿ ಜಯ ಪಡೆದರು. ಒರಿಸ್ಸಾದಲ್ಲಿ ವಿಶೇಷವಾಗಿ ಪಕ್ಷಗಳಿಗಿಂತ ವ್ಯಕ್ತಿಗಳಿಗೆ ಜನತೆ ಬೆಂಬಲ ಕೊಟ್ಟಿತು. ಒರಿಸ್ಸಾದಲ್ಲಿ ಆರು ಜನ ರಾಜ-ಕುಮಾರರು ಚುನಾವಣೆಗೆ ನಿಂತಿದ್ದು, ಎಲ್ಲರೂ ಆರಿಸಲ್ಪಟ್ಟರು. ಬಿಹಾರದಲ್ಲಿ ಕೂಡ ವ್ಯಕ್ತಿ ಪ್ರಭಾವದಿಂದ ಅನೇಕರು ಚುನಾಯಿತ ರಾದರು. ರಾಮಘರ್ ರಾಜರು ಬಿಹಾರದ ಕಂದಾಯ ಮಂತ್ರಿ ಸ್ಪರ್ಧಿಸಿದ ಕಡೆಗಳಲ್ಲೆಲ್ಲಾ ಎದುರಾಗಿ ನಿಂತು ಮಂತ್ರಿಯನ್ನು ಸೋಲಿಸಿದರು. ಜಮೀನುದಾರಿ ಪದ್ಧತಿಯನ್ನು ರದ್ದುಗೊಳಿಸಿದ ಸರ್ಕಾರದ ಧೋರಣೆಯನ್ನು ಪ್ರಶ್ನಿಸಿ ಚುನಾವಣೆಗೆ ನಿಂತ ರಾಜರಿಗೆ ರೈತರು ಬಹುಮತ ನೀಡಿದುದು ಪ್ರಜಾಪ್ರಭುತ್ವದ ಕೌತುಕವೇ ಸರಿ. ರಾಜಾಸ್ಥಾನದಲ್ಲಿ ಜೋಧಪುರದ ಮಹಾರಾಜರು ಆ ರಾಜ್ಯದ ಮುಖ್ಯಮಂತ್ರಿಯನ್ನು ಸೋಲಿಸಿದರು. ಕೆಲವರು ದೊಡ್ಡ ಜಮೀನುದಾರರ ಸಹಾಯದಿಂದಲೂ ಜಾತಿವಾದಿಗಳ ಬೆಂಬಲ ದಿಂದಲೂ ಹಣದ ಪ್ರಭಾವದಿಂದಲೂ ಮತ್ತು ಜನತೆಯ ಜ್ಞಾನದ ಅಭಾವದಿಂದಲೂ ಚುನಾವಣೆಗಳಲ್ಲಿ ಸುಲಭವಾಗಿ ಗೆದ್ದರು.

ಚುನಾವಣೆಗಳಲ್ಲಿ ಗೆಲ್ಲಲು ಸುಲಭಮಾರ್ಗಗಳನ್ನು ರಾಜ ಕಾರಣಿಗಳು ಅವಲಂಬಿಸುವುದು ಸ್ವಾಭಾವಿಕ. ಪ್ರಣಯ, ಯುದ್ಧ ಳಲ್ಲಿ ಯಾವ ಮಾರ್ಗವಾದರೂ ಸರಿಯೇ ಎಂದು ಹೇಳುವಂತೆ ಚುನಾವಣೆಯಲ್ಲಿ ಕೂಡ ಗೆಲ್ಲುವ ಗುರಿಯನ್ನು ಸಾಧಿಸಲು ಯಾವ ಮಾರ್ಗವನ್ನಾದರೂ ಅನುಸರಿಸಲು ಅಭ್ಯರ್ಥಿಗಳು ಹಿಂದೆ ಮುಂದೆ

ನೋಡುವುದಿಲ್ಲ. ೧೯೫೧-೫೨ ರ ಚುನಾವಣೆಗಳಲ್ಲಿ ಜನತೆಯ ಅಜ್ಞಾನ, ಸ್ವಾರ್ಥ, ಜಾತೀಯ ಪ್ರಭಾವ ಮೊದಲಾದ ಲೋಪಗಳು ಕಂಡುಬಂದರೂ ಜನರು ಕಾಂಗ್ರೆಸ್ ಸಂಸ್ಥೆಯೇ ದೇಶವನ್ನು ಆಳಬೇಕೆಂಬ ಆಶಯವನ್ನು ವ್ಯಕ್ತಪಡಿಸದೆ ಇರಲಿಲ್ಲ. ಕಾಂಗ್ರೆಸ್ಸಿನ ಧೋರಣೆಗಳೇನೆ ಇರಲಿ ರಾಜ್ಯದ ಆಡಳಿತ ಕಾಂಗ್ರೆಸ್ ಪಕ್ಷದಿಂದಲೇ ನಡೆಯಬೇಕೆಂಬ ಅಭಿಪ್ರಾಯವನ್ನು ಮತದಾರರು ವ್ಯಕ್ತಪಡಿಸಿದರು ಎಂಬುದರಲ್ಲಿ ಸಂದೇಹವಿಲ್ಲ. ಕಾಂಗ್ರೆಸ್ ಬಹಳ ಹಳೆಯ ಸಂಸ್ಥೆ ಮತ್ತು ಸ್ವರಾಜ್ಯಕ್ಕಾಗಿ ಹೋರಾಡಿದ ಪಕ್ಷವೆಂಬ ನೆನಪು, ನೆಹರೂರವರ ನಾಯಕತ್ವಗಳು ಚುನಾವಣೆಗಳಲ್ಲಿ ಕಾಂಗ್ರೆಸ್ಸಿಗೆ ಯಶಸ್ಸನ್ನು ಗಳಿಸಿಕೊಟ್ಟವು. ಆದರೂ ಕಾಂಗ್ರೆಸ್ಸು ಅಲ್ಪಸಂಖ್ಯಾತ ಮತಗಳನ್ನು ಪಡೆದು ಗೆದ್ದಿತೇ ವಿನಾ ಮತದಾರರ ಪ್ರಚಂಡ ಬಹುಮತ ಗಳಿಸದೆ ಹೋಯಿತು. ಎದುರು ಪಕ್ಷಗಳು ಸಹ ಇದೇ ರೀತಿ ಅಲ್ಪಸಂಖ್ಯಾತ ಮತಗಳ ಬೆಂಬಲ ಪಡೆದರೆ ಅಧಿಕಾರಕ್ಕೆ ಬರಬಹುದು ಎಂಬುದು ೧೯೫೧-೫೨ ರ ಚುನಾವಣೆಗಳಿಂದ ಎಲ್ಲರೂ ಕಲಿಯಬೇಕಾದ ಪಾಠವೆನ್ನಬಹುದು.

೧೯೫೧-೫೨ ರ ಚುನಾವಣೆಗಳಿಂದ ಇನ್ನೊಂದು ಅಂಶ ವ್ಯಕ್ತಪಟ್ಟಿತು. ಜನರ ನಂಬಿಕೆಗೆ ಪಾತ್ರರಾಗದೆ ಕೇವಲ ರಾಜಕೀಯ ತಂತ್ರ ಚಾತುರ್ಯಗಳಿಂದಲೇ ಚುನಾಯಿತರಾಗುವುದು ಕಷ್ಟ ಎಂಬ ಅನುಭವ ಅನೇಕ ಜನರಿಗೆ ಬಂದಿತು. ಮೇಲಿನವರನ್ನು ಒಲಿಸಿಕೊಂಡು ಟಿಕೆಟ್‌ಗಳನ್ನು ಪಡೆದರೆ ಸಾಲದು; ಚುನಾವಣೆಯಲ್ಲಿ ಗೆಲ್ಲಲು ಜನರ ವಿಶ್ವಾಸವನ್ನು ಪಡೆದಿರಬೇಕು ಎಂಬ ತಿಳುವಳಿಕೆ ಕೆಲವರಿಗೆ ಬಂದಿತು. ಹೈದರಾಬಾದಿನ ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಗಳು ತಮ್ಮ ಹಿಂಬಾಲಕರಿಗೆ ಅಸೆಂಬ್ಲಿಗೂ, ತಾವು ಲೋಕಸಭೆಗೂ ಸ್ಪರ್ಧಿಸಲು ಕಾಂಗ್ರೆಸ್ ಟಿಕೇಟುಗಳನ್ನು ತಮ್ಮ

ಪ್ರಭಾವ ಬೀರಿ ಪಡೆದುಕೊಂಡು ಚುನಾವಣೆಗಿಳಿದರು. ಭಾರತದ ಮಹಾಪ್ರಧಾನಿ ಜವಹರಲಾಲರನ್ನೂ ಕಾಂಗ್ರೆಸ್ ಪ್ರಚಾರಕ್ಕಾಗಿ ತಾವು ನಿಂತಿದ್ದ ರಾಯಚೂರಿಗೆ ಕರೆತಂದು ಭಾಷಣ ಮಾಡಿಸಿದರು. ಆದರೆ ಫಲಿತಾಂಶವೇನಾಯಿತು? ಅತೃಪ್ತ ಕಾಂಗ್ರೆಸ್ಸಿನವರು ಕಾಂಗ್ರೆಸ್ಸಿಗೆ ರಾಜಿನಾಮೆ ಕೊಟ್ಟು ಸ್ವತಂತ್ರರಾಗಿ ಜಿಲ್ಲೆಯ ಎಲ್ಲ ಸ್ಥಾನಗಳಿಗೂ ಸ್ಪರ್ಧಿಸಿ ಕಾಂಗ್ರೆಸ್ಸಿನ ಉಮೇದುವಾರರನ್ನು ಸೋಲಿಸಿದರು. ಫಾರ್ಲಿಮೆಂಟಿಗೆ ನಿಂತಿದ್ದ ಪ್ರಧಾನ ಕಾರ್ಯದರ್ಶಿಗಳೂ, ಅವರ ಹಿಂಬಾಲಕರೂ ಕೂಡ ಪರಾಜಿತರಾದರು. ಜನರು ಕಣ್ಣುಮುಚ್ಚಿಕೊಂಡು ಮತ ಹಾಕುವುದಿಲ್ಲವೆಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನಗಳು ಬೇಕಾಗಿಲ್ಲ, ಜನರನ್ನು ಎಲ್ಲರೂ ಯಾವಾಗಲೂ ಮೋಸಗೊಳಿಸುವುದು ಸಾಧ್ಯವಿಲ್ಲವೆಂಬುದು ಮೇಲಿನ ಘಟನೆಯಿಂದ ವ್ಯಕ್ತಪಡುವುದಿಲ್ಲವೇ ?

**ಚುನಾವಣಾ ವೆಚ್ಚ :** ಚುನಾವಣಾಕಾನೂನಿನಂತೆ ಚುನಾವಣೆಗೆ ಸ್ಪರ್ಧಿಸಿದ ಪ್ರತಿ ಉಮೇದುವಾರನೂ, ಗೆಲ್ಲಲಿ ಅಥವಾ ಸೋಲಲಿ—ಚುನಾವಣೆಯಲ್ಲಿ ತಾನು ಖರ್ಚುಮಾಡಿದ ತಪಶೀಲನ್ನು ಚುನಾವಣಾಧಿಕಾರಿಗಳಿಗೆ ಕೊಡಬೇಕು. ನಿರ್ದಿಷ್ಟ ಕಾಲದಲ್ಲಿ ಮತ್ತು ನಿಯಮಗಳ ಪ್ರಕಾರವಾಗಿ ವೆಚ್ಚದ ವಿವರಗಳನ್ನು ಕೊಡದಿದ್ದರೆ ಚುನಾವಣಾ ಅನರ್ಹತೆಗೀಡಾಗಬೇಕಾಗುತ್ತದೆ, ೧೯೫೧–೫೨ ರ ಚುನಾವಣೆಯಲ್ಲಿ ೨೭,೯೧೫ ಉಮೇದುವಾರರೂ ೩,೧೮೭ ಚುನಾವಣಾ ಏಜಂಟರೂ ಭಾಗವಹಿಸಿದ್ದು ೭,೨೪೪ ಉಮೇದುವಾರರೂ ಮತ್ತು ೮೫೫ ಏಜಂಟರೂ ಸಕಾಲದಲ್ಲಿ, ನಿರ್ದಿಷ್ಟರೀತಿಯಲ್ಲಿ ಚುನಾವಣಾವೆಚ್ಚದ ವರದಿಯನ್ನು ಕೊಡಲಿಲ್ಲ. ಇನ್ನು ಮುಂದೆ ಅವರು ಚುನಾವಣೆಗೆ ನಿಲ್ಲಲು ಅನರ್ಹರೆಂದು ಸಾರಲಾಯಿತು. ಆ ಪೈಕಿ, ಆ ಮೇಲೆ ೨,೫೦೭

ಜನರಿಗೆ ಚುನಾವಣಾ ಅನರ್ಹತೆಯನ್ನು ಚುನಾವಣಾ ಆಯೋಗವು ಕಿತ್ತುಹಾಕಿತು.

**ಚುನಾವಣಾ ಅರ್ಜಿಗಳು :** ಚುನಾವಣೆಗಳ ಫಲಿತಾಂಶವು ಹೊರಬಿದ್ದು ಚುನಾವಣೆಯಲ್ಲಿ ಗೆದ್ದ ವ್ಯಕ್ತಿಯು ಶಾಸನಸಭೆಯಲ್ಲಿ ಭಾಗವಹಿಸಿದರೂ ಚುನಾವಣೆಯು ಅಕ್ರಮವಾಗಿ ನಡೆಯಿತೆಂದೂ ಅದನ್ನು ರದ್ದುಗೊಳಿಸಬೇಕೆಂದೂ ಚುನಾವಣೆಯಲ್ಲಿ ಸೋತವರು ಅಥವಾ ಕ್ಷೇತ್ರದ ಮತದಾರರು ಅರ್ಜಿ ಹಾಕಬಹುದು. ಅರ್ಜಿಯನ್ನು ಪರಿಶೀಲಿಸಿ ತೀರ್ಪುಕೊಡಲು, ಚುನಾವಣಾ ನ್ಯಾಯ ಮಂಡಲಿ (ಪಂಚಾಯ್ತಿ) ಯನ್ನು ನೇಮಿಸಲು ಚುನಾವಣಾ ಕಮಿಷನ್ನಿಗೆ ಅಧಿಕಾರವಿದೆ. ಇದೇ ಮಂಡಲಿಗೆ ಅರ್ಜಿಯನ್ನು ಅಂಗೀಕರಿಸುವುದಕ್ಕೂ ಬಿಡುವುದಕ್ಕೂ ಅಧಿಕಾರವಿದೆ.

೧೯೫೧–೫೨ ರ ಮಹಾಚುನಾವಣೆಗಳಾದ ಮೇಲೆ ಅನೇಕರು ಹೀಗೆ ಅರ್ಜಿ ಹಾಕಿದರು. ಒಟ್ಟು ೩೩೦ ಅರ್ಜಿಗಳು ಹಾಕಲ್ಪಟ್ಟವು. ಇವುಗಳಲ್ಲಿ ಲೋಕಸಭೆಯ ಚುನಾವಣೆಗೆ ಸಂಬಂಧಿಸಿದ ಅರ್ಜಿ ೩೯ ; ಅಸೆಂಬ್ಲಿಗಳಿಗೆ ಸಂಬಂಧಿಸಿದ ಅರ್ಜಿಗಳು ೨೮೬. ಇವುಗಳ ಪೈಕಿ ಆರನ್ನು ವಾಪಸ್ ಪಡೆಯಲು ಆಯೋಗವು ಅನುಮತಿ ಕೊಟ್ಟು ೧೮ ಅರ್ಜಿಗಳನ್ನು ತಿರಸ್ಕರಿಸಿತು. ಉಳಿದ ಅರ್ಜಿಗಳನ್ನು (೩೧೪) ಚುನಾವಣಾ ನ್ಯಾಯಮಂಡಲಿಗಳಿಗೆ ಹಾಕಿತು. ಕೆಲವು ಉಮೇದುವಾರರ ನಾಮಪತ್ರಗಳನ್ನು ಅನ್ಯಾಯದಿಂದ ರಿಟರ್ನಿಂಗ್ ಅಧಿಕಾರಿಗಳು ತಿರಸ್ಕರಿಸಿದ್ದರೆಂದೂ, ಕೆಲವು ಚುನಾವಣೆಗಳಲ್ಲಿ ಅಕ್ರಮಗಳು ನಡೆದುವೆಂದೂ, ಅನೇಕ ಕಾರಣಗಳನ್ನು ನಮೂದಿಸಿ ಚುನಾವಣಾ ತಕರಾರು ಅರ್ಜಿಗಳನ್ನು ಹಾಕಲಾಗಿತ್ತು.

ಕೆಲವು ಅರ್ಜಿಗಳು ಬೇಗ ಇತ್ಯರ್ಥವಾದವು. ಕೇವಲ ೨ ತಿಂಗಳು ೨೨ ದಿನಗಳಲ್ಲಿಯೇ ಒಂದು ಮೊಕದ್ದಮೆಯಲ್ಲಿ ತೀರ್ಪು ಕೊಡಲಾಯಿತು. ಎಷ್ಟೋ ಮೊಕದ್ದಮೆಗಳು ಎರಡು ವರ್ಷಗಳಾದರೂ ಅಂತಿಮವಾಗಿ ಇತ್ಯರ್ಥವಾಗಲಿಲ್ಲ. ಕೆಲವು ಮೊಕದ್ದಮೆಗಳು ಚುನಾವಣಾ ನ್ಯಾಯಮಂಡಲಿಯಿಂದ ಹೈಕೋರ್ಟ್, ಸುಪ್ರೀಂಕೋರ್ಟ್‌ವರೆಗೂ ಹೋದವು. ಕೆಲವು ಸ್ವಾರಸ್ಯದ ಮೊಕದ್ದಮೆಗಳನ್ನು ಇಲ್ಲಿ ಉಲ್ಲೇಖಿಸಬಹುದು. ಬಿಹಾರ ವಿಧಾನ ಸಭೆಯು ವಿಧಾನಪರಿಷತ್ತಿಗೆ ೨೪ ಜನರನ್ನೂ ಮದ್ರಾಸ್ ವಿಧಾನ ಸಭೆಯು ವಿಧಾನಪರಿಷತ್ತಿಗೆ ೨೪ ಜನರನ್ನೂ ಆರಿಸಿದುದನ್ನು ಚುನಾವಣಾ ನ್ಯಾಯಮಂಡಲಿಯು ರದ್ದುಗೊಳಿಸಿದುದರಿಂದ ಮತ್ತೆ ಚುನಾವಣೆ ನಡೆಯಿತು. ಲೋಕಸಭೆಯ ಚುನಾವಣೆಯಲ್ಲಿ ಸೋತಿದ್ದ ಶ್ರೀ ಎಚ್. ವಿ. ಕಾಮತರು ಹಾಕಿದ್ದ ಅರ್ಜಿಯನ್ನು ಎತ್ತಿಹಿಡಿದು ತೀರ್ಪುಕೊಟ್ಟಿತು. ಮರುಚುನಾವಣೆಯಲ್ಲಿ ಅವರು ಲೋಕಸಭೆಗೆ ಚುನಾಯಿತರಾದರು. ಮೈಸೂರಿನ ತರೀಕೆರೆ ಮತ್ತು ಪಿರಿಯಾಪಟ್ಟಣಗಳ ಚುನಾವಣಾ ಮೊಕದ್ದಮೆಗಳು ಪ್ರಸಿದ್ಧವಾಗಿವೆ. ತರೀಕೆರೆಯ ಚುನಾವಣಾ ಮಂಡಲಿಯು ಶ್ರೀ ಟಿ. ನಾಗಪ್ಪನವರ ಚುನಾವಣೆಯನ್ನು ರದ್ದುಗೊಳಿಸಿತು ಮತ್ತು ಅರ್ಜಿದಾರ ಶ್ರೀ ಟಿ. ಸಿ. ಬಸಪ್ಪನವರು ಚುನಾಯಿತರಾದರೆಂದು ಸಾರಿತು. ಶ್ರೀ ಟಿ. ನಾಗಪ್ಪನವರು ಹೈಕೋರ್ಟಿಗೆ ಅಪೀಲುಮಾಡಲಾಗಿ ಹೈಕೋರ್ಟು ಶ್ರೀ ನಾಗಪ್ಪನವರ ಚುನಾವಣೆಯೇ ಕ್ರಮವಾದುದೆಂದು ಎತ್ತಿ ಹಿಡಿಯಿತು. ಹೈಕೋರ್ಟಿನ ತೀರ್ಪು ಸರಿಯಾದುದಲ್ಲವೆಂದು ಸುಪ್ರೀಂಕೋರ್ಟ್ ನಿರ್ಣಯಕೊಟ್ಟು ಚುನಾವಣಾಮಂಡಲಿಯು ನಿರ್ಧಾರವನ್ನು ಎತ್ತಿ ಹಿಡಿಯಿತು. ಚುನಾವಣೆಗಳು ಇಂತಹ ಸಂಕೀರ್ಣ ಸಂದರ್ಭ ಬಂದರೆ ಎಷ್ಟು ಕಾಲ,

ಹಣ, ಮತ್ತು ಉತ್ಸಾಹವನ್ನು ವ್ಯಯಮಾಡಿಸಬಲ್ಲವು ಎನ್ನಲು ಹೆಚ್ಚಿನ ನಿದರ್ಶನ ಬೇಕೆ?

——

೮

# ಪ್ರಜಾಧರ್ಮ

ಪ್ರಜಾಪ್ರಭುತ್ವವು ಯಶಸ್ವಿಯಾಗಲು ಚುನಾವಣೆಗಳು ನ್ಯಾಯವಾಗಿ ನಡೆಯಬೇಕು. ಚುನಾವಣೆಗಳನ್ನು ಸಮರ್ಪಕವಾಗಿ ನಡೆಸುವುದು ಚುನಾವಣಾಕಮಿಷನ್ನಿನ ಕರ್ತವ್ಯವಾಗಿದ್ದರೂ ಎಲ್ಲರ ಸಹಕಾರವಿಲ್ಲದೆ ಕಮಿಷನ್ನು ತನ್ನ ಕರ್ತವ್ಯವನ್ನು ನಿರ್ವಹಿಸಲಾರದು. ಚುನಾವಣೆಯು ಕೆಲವರಿಗೆ ರಾಜಕೀಯ ಹವ್ಯಾಸವಾದರೆ ಇನ್ನು ಕೆಲವರಿಗೆ ಜೀವನೋಪಾಯವೆನಿಸಬಹುದು. ಅನೇಕರು ಚುನಾವಣೆಗಳಲ್ಲಿ ಆಸಕ್ತಿ ವಹಿಸದಿರಬಹುದು. ಪ್ರತಿಯೊಬ್ಬರೂ ತಮ್ಮ ಹೊಣೆಗಾರಿಕೆಯನ್ನು ಅರಿತು ನಡೆದರೆ ಚುನಾವಣೆಗಳು ಸರಿಯಾಗಿ ನಡೆದು ಸರಿಯಾದ ಪ್ರತಿನಿಧಿಗಳು ಆರಿಸಲ್ಪಡುವುದರಲ್ಲಿ ಸಂದೇಹವಿಲ್ಲ.

ಪ್ರತಿಯೊಬ್ಬರೂ ಚುನಾವಣಾ ಕಾನೂನನ್ನು ಚೆನ್ನಾಗಿ ತಿಳಿದುಕೊಂಡು ಅದರಂತೆ ವರ್ತಿಸುವುದು ನಾಗರಿಕ ಧರ್ಮ. ಮತದಾರರು, ಉಮೇದುವಾರರು ಮತ್ತು ಸರ್ಕಾರಿ ನೌಕರರು ಚುನಾವಣಾ ನಿಯಮಗಳನ್ನು ಅತಿಕ್ರಮಿಸಕೂಡದು. ರಾಜಕೀಯ ಪಕ್ಷಗಳು ಜನರಿಗೆ ತಿಳುವಳಿಕೆಯನ್ನು ಕೊಡಬೇಕು. ಯೋಗ್ಯ ಉಮೇದುವಾರರನ್ನು ನಿಲ್ಲಿಸಬೇಕು. ಮತದಾರರು

ಮತವನ್ನು ವಿವೇಕದಿಂದಲೂ ರಾಷ್ಟ್ರಹಿತ ದೃಷ್ಟಿಯಿಂದಲೂ ಚಲಾಯಿಸಬೇಕು. ಸರ್ಕಾರಿ ಅಧಿಕಾರಿಗಳು ಪಕ್ಷಪಾತವಿಲ್ಲದೆ ಚುನಾವಣೆಗಳನ್ನು ನಡೆಸಬೇಕು.

ನಮ್ಮ ದೇಶದಲ್ಲಿ ಮತದಾರರು ಅಷ್ಟು ವಿದ್ಯಾವಂತರಲ್ಲ. ರಾಜಕೀಯ ಪಕ್ಷಗಳ ಧ್ಯೇಯ ಧೋರಣೆಗಳು ಅನೇಕರಿಗೆ ಅರ್ಥವಾಗುವುದಿಲ್ಲ. ಜನರ ಅಜ್ಞಾನವನ್ನು ಕೆಲವರು ಉಪಯೋಗಿಸಿಕೊಳ್ಳಲು ಅವಕಾಶವಿದೆ. ಜಾತಿಯ ಹಿತ, ವ್ಯಕ್ತಿಯ ಪ್ರಭಾವ, ಹಣದ ಪ್ರಭಾವ ಮೊದಲಾದುವುಗಳಿಂದ ದೂರವಾಗಿದ್ದು ಯೋಗ್ಯರಾದವರನ್ನು ಆರಿಸುವುದು ಮತದಾರರ ಕರ್ತವ್ಯ. ಪ್ರಜಾಪ್ರಭುತ್ವದಲ್ಲಿ ಮತದಾನದ ಬಗ್ಗೆ ಹೆಚ್ಚು ಹೇಳಬೇಕಾಗಿಲ್ಲ. ಜನರ ಕೈಯ್ಯಲ್ಲಿರುವ ಮತವು ಯಾರು ಸರ್ಕಾರವನ್ನು ನಡೆಸಬೇಕೆಂಬುದನ್ನು ನಿರ್ಧರಿಸುತ್ತದೆ. ಜನರ ಮತದಿಂದ ಚುನಾಯಿತರಾಗುವ ಪ್ರತಿನಿಧಿಗಳು ಇಡೀ ದೇಶಕ್ಕೆ ಬೇಕಾಗುವ ಕಾನೂನುಗಳನ್ನು ಮಾಡುತ್ತಾರೆ. ದೇಶದ ಆಗುಹೋಗುಗಳನ್ನು ರೂಪಿಸುವ ದೊಡ್ಡ ಹೊಣೆ ಅವರ ಮೇಲಿದೆ. ಇಂದಿನ ಕಾಲದಲ್ಲಿ ಸರ್ಕಾರದ ಕರ್ತವ್ಯಗಳು ಹೆಚ್ಚಿವೆ. ಜಾಣರೂ ಪ್ರಾಮಾಣಿಕರೂ ಅಧಿಕಾರಕ್ಕೆ ಬಂದರೆ ದೇಶ ಬದುಕುತ್ತದೆ. ಆದುದರಿಂದ ಪ್ರತಿನಿಧಿಗಳನ್ನು ಆರಿಸುವಾಗ ಜನರು ಎಚ್ಚರಿಕೆ ವಹಿಸಬೇಕು.

ಪಕ್ಷಗಳ ಧ್ಯೇಯ ಧೋರಣೆಗಳನ್ನು ಲಕ್ಷಿಸುವುದರ ಜೊತೆಗೆ ಉಮೇದುವಾರರ ಶುದ್ಧವಾದ ಚಾರಿತ್ರ್ಯ ಮತ್ತು ಸೇವೆಗಳನ್ನು ಪರಿಗಣಿಸಬೇಕು, ಆರಿಸಲ್ಪಟ್ಟ ಎಲ್ಲಾ ಸದಸ್ಯರೂ ಶಾಸನ ಸಭೆಗಳಲ್ಲಿ ಹೆಚ್ಚಾಗಿ ಮಾತನಾಡಲು ಸಮಯವಿರುವುದಿಲ್ಲ. ಎಲ್ಲರೂ ಮಂತ್ರಿಗಳಾಗುವುದೂ ಸಾಧ್ಯವಿಲ್ಲ. ಆದುದರಿಂದ ನಮ್ಮ

ಪ್ರತಿನಿಧಿಗಳಲ್ಲಿರಬೇಕಾದ ಒಂದು ಮುಖ್ಯ ಗುಣವೆಂದರೆ ಪ್ರಾಮಾಣಿಕತೆ. ವ್ಯಕ್ತಿಯ ಗುಣಶೀಲಕ್ಕೆ ಪ್ರಥಮ ಪ್ರಾಶಸ್ತ್ಯ ನೀಡಬೇಕು. ಸಂಶಯಾಸ್ಪದ ಚಾರಿತ್ರ್ಯವುಳ್ಳವರು ಆರಿಸಿ ಬಂದರೆ ಯೋಗ್ಯ ಮಂತ್ರಿ ಮಂಡಲಗಳು ರಚನೆಯಾಗುವುದು ಕಷ್ಟ. ಅದುದರಿಂದ ಅನುಮಾನಾಸ್ಪದ ಚಾರಿತ್ರ್ಯವುಳ್ಳ ಉಮೇದುವಾರರನ್ನು ಮತದಾರರು ತಿರಸ್ಕರಿಸಬೇಕು. ತಮ್ಮ ಸ್ಥಾನವನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡು ಸಾರ್ವಜನಿಕ ಹಿತವನ್ನು ಮರೆಯುವವರಿಗೆ ಮತವನ್ನು ಕೊಡಬಾರದು.

ಚುನಾವಣಾ ಕಾಲದಲ್ಲಿ ಪಕ್ಷಗಳ ಪ್ರಚಾರ ಬಿರುಸಾಗಿ ನಡೆಯುತ್ತದೆ. ಆರೋಪ ಪ್ರತ್ಯಾರೋಪಗಳು ನಡೆದಿರುತ್ತವೆ. ಚುನಾವಣಾ ಘೋಷಣೆಗಳು ಎಲ್ಲೆಲ್ಲೂ ಕೇಳಿ ಬರುತ್ತವೆ. ಜನರು ಚುನಾವಣಾ ಮಾತುಗಳಿಗೆ ಮೋಸಹೋಗದೆ ಯಾರಲ್ಲಿ ನಂಬಿಕೆಯಿದೆಯೋ ಅವರಿಗೆ ಬೆಂಬಲ ನೀಡಬೇಕು. ಮತದಾನವು ಗುಪ್ತವಾಗಿ ನಡೆಯುವುದರಿಂದ ಸರಿಯಾದವರನ್ನು ಆರಿಸುವುದು ಮತದಾರರ ಪವಿತ್ರ ಧರ್ಮವಾಗಿದೆ. ಮತದಾರರು ವಿವೇಕದಿಂದಲೂ ನಿರ್ಭಯವಾಗಿಯೂ ಮತವನ್ನು ಹಾಕದಿದ್ದರೆ ರಾಷ್ಟ್ರದ ಮೇಲೆ ಅತ್ಯಂತ ಕೆಟ್ಟ ಪರಿಣಾಮವಾಗುತ್ತದೆ.

ಎಷ್ಟೋ ಜನರು ಮತಗಳನ್ನು ಕೊಡಲು ಮತಕೇಂದ್ರಕ್ಕೆ ಹೋಗುವುದಿಲ್ಲ. ಚುನಾವಣೆಗಳೆಂದರೆ ಅವರಿಗೆ ತಾತ್ಸಾರ. ಚುನಾವಣಾ ಗೊಂದಲ ನಮಗೇಕೆ ಎಂದೂ, ಯಾರಾದರೂ ಆರಿಸಲ್ಪಡಲಿ ನಮಗೇನು ಎಂಬ ಮನೋಭಾವದಿಂದಲೂ ಕೆಲವರು ಓಟನ್ನೇ ಚಲಾಯಿಸುವುದಿಲ್ಲ. ಇದಕ್ಕಿಂತ ಅನ್ಯಾಯ ಬೇರೆ ಇಲ್ಲ. ಬ್ರಿಟನ್ನಿನಂತಹ ದೇಶದಲ್ಲಿ ಕೂಡ ಎಷ್ಟೋ ಜನ ಮತ ಚಲಾಯಿಸುವುದಿಲ್ಲ. ೧೯೪೫ರ ಮಹಾಚುನಾವಣೆಯಲ್ಲಿ

ಶೇ || ೨೬ರಷ್ಟು ಮತದಾರರು ಅಲ್ಲಿ ಮತವನ್ನು ಚಲಾಯಿಸಲಿಲ್ಲ. ಭಾರತದಲ್ಲಿ ೧೯೩೭ ರಲ್ಲಿ ಪ್ರಾಂತ ಶಾಸನಸಭೆಗಳಿಗೆ ಚುನಾವಣೆ ನಡೆದಾಗ ಶೇ|| ೫೪ ರಷ್ಟು ಜನ ಓಟು ಹಾಕಿದರು. ಮಹಿಳೆಯರು ಅಷ್ಟಾಗಿ ಚುನಾವಣೆಗಳಲ್ಲಿ ಆಸಕ್ತಿ ತೋರಲಿಲ್ಲ. ೧೯೫೧–೫೨ರ ಮಹಾಚುನಾವಣೆಯಲ್ಲಿ ಶೇಕಡ ೫೧ ರಷ್ಟು ಮತದಾರರು ಮತಹಾಕಿದರು. ಖಾಯಿಲೆ ಮುಂತಾದ ನ್ಯಾಯವಾದ ಕಾರಣಗಳಿದ್ದರೆ ಮತಕೇಂದ್ರಕ್ಕೆ ಹೋಗಿರೆಂದು ಯಾರೂ ಉಪದೇಶ ಮಾಡುವುದಿಲ್ಲ. ಸೋಮಾರಿತನ, ಉಪೇಕ್ಷೆ, ಉದಾಸೀನತೆಗಳಿಂದ ಎಷ್ಟೋಮಂದಿ ಮತಗಳನ್ನು ಹಾಕಲು ಹೋಗುವುದಿಲ್ಲ. ಇನ್ನು ಕೆಲವು ಬಡ ಕೆಲಸಗಾರರಿಗೆ ಓಟು ಮಾಡಲು ಹೋದರೆ ಒಂದು ದಿನದ ದುಡಿಮೆ ಕೆಡುತ್ತದೆ. ಹಳ್ಳಿಗಳಲ್ಲಿ ಜನರು ರಾಜಕೀಯದಲ್ಲಿ ಹಿಂದುಳಿದಿರಬಹುದು. ಮತಕೇಂದ್ರಗಳು ದೂರದಲ್ಲಿರಬಹುದು. ಈ ಕಷ್ಟಗಳನ್ನು ನಿವಾರಿಸಿ ಬಹುಮಂದಿ ಚುನಾವಣೆಗಳಲ್ಲಿ ಭಾಗವಹಿಸಿ ಮತದಾನ ಮಾಡಲು ರಾಜಕೀಯಪಕ್ಷಗಳು ರಾಜಕೀಯ ಶಿಕ್ಷಣವನ್ನು ಕೈಗೊಳ್ಳಬೇಕು. ಸ್ವಯಂಸೇವಕರುಗಳ ಸಹಾಯದಿಂದ ಜನರಿಗೆ ಮಾರ್ಗದರ್ಶನ ಮಾಡಬೇಕು.

ಚುನಾವಣೆಗಳನ್ನು ಬಹಿಷ್ಕರಿಸುವ ಸಂಪ್ರದಾಯವನ್ನು ಸ್ವಾತಂತ್ರ್ಯ ಪೂರ್ವದಲ್ಲಿ ಆಚರಿಸಲಾಗುತಿತ್ತು. ಸ್ವರಾಜ್ಯ ಬಂದ ಮೇಲೆ ಈ ಅಸ್ತ್ರವನ್ನು ಕೆಲವರು ಪ್ರಯೋಗಿಸಬಹುದು. ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ಈರೀತಿ ಬಹಿಷ್ಕಾರಗಳನ್ನು ಹಾಕಬಾರದು. ಒಳ್ಳೆಯ ಜನ ಮತಕೊಡದೆ ಇದ್ದರೆ ಇದರ ಲಾಭಪಡೆದು ಅನೇಕರು ಎಂತೆಂತಹ ಮಟ್ಟದ ವ್ಯಕ್ತಿಗಳನ್ನೋ ಆರಿಸುವ ಸಂಭವವಿದೆ.

ನಮ್ಮ ಮತದಾರರಲ್ಲಿ ಅರ್ಧ ಜನಸಂಖ್ಯೆ ಮಹಿಳೆಯರು. ಇವರ ಮತವನ್ನು ಚಲಾಯಿಸಲು ಸಾಮಾಜಿಕ ಕಷ್ಟಗಳಿರಬಹುದು. ಹೆಂಗಸರು ಮತಕೇಂದ್ರಕ್ಕೆ ಹೋಗಲು ಹಿಂದೆಗೆಯಬಹುದು. ಘೋಷಾ ವಗ್ಯೆರೆ ಪ್ರತಿಬಂಧಕಗಳು ಅಡ್ಡಿ ಬರಬಹುದು. ಸ್ತ್ರೀಯರು ತಮ್ಮ ಮತದ ಹಕ್ಕನ್ನು ಉಪಯೋಗಿಸಬೇಕೆಂದು ಮಹಿಳಾಸಂಸ್ಥೆಗಳು ಪ್ರಚಾರಮಾಡುವುದು ಅಗತ್ಯ. ಮಹಿಳೆಯರಲ್ಲಿ ರಾಜಕೀಯ ಜಾಗೃತಿಯಾದಂತೆ ಅವರು ಚುನಾವಣೆಗಳಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸುವುದರಲ್ಲಿ ಸಂದೇಹವಿಲ್ಲ. ಒಟ್ಟಿನಲ್ಲಿ ಎಲ್ಲ ಮತದಾರರೂ ಅಸಡ್ಡೆ, ತಾಟಸ್ಥ್ಯ ವಹಿಸದೆ ಮತದ ಹಕ್ಕನ್ನು ಚಲಾಯಿಸಲು ಮರೆಯಕೂಡದು.

ಮತವನ್ನು ಚಲಾಯಿಸುವುದು ಮಾತ್ರವಲ್ಲ; ಅದನ್ನು ವಿವೇಕದಿಂದಲೂ ಪ್ರಾಮಾಣಿಕವಾಗಿಯೂ ಕೊಡಬೇಕು. ತಾವು ರೋಗ ಬಂದಾಗ ಯೋಗ್ಯರಾದ ಡಾಕ್ಟರುಗಳನ್ನು ಹುಡುಕಿಕೊಂಡು ಹೋಗುವಂತೆ ಉತ್ತಮವಾದ ಉಮೇದುವಾರರನ್ನು ಹುಡುಕಿ ಆರಿಸಬೇಕು. ನಮ್ಮ ದೇಶದಲ್ಲಿ ಅನೇಕ ದ್ವೇಷಾಸೂಯೆಗಳು ತುಂಬಿವೆ. ಅನೇಕ ರೀತಿಯ ಛಲಗಳಿವೆ. ವ್ಯಕ್ತಿಯ ಛಲ, ಜಾತಿಯ ಛಲ, ಗುಂಪಿನ ಛಲ ಮೊದಲಾದ ಛಲಗಳಿವೆ. ಒಣ ಹಠಗಳು ಎಲ್ಲಿಯವರೆಗಾದರೂ ಹೋಗಬಲ್ಲವು. ಚುನಾವಣೆಗಳು ಅನೇಕ ಹಠಗಳನ್ನು ತೀರಿಸಿಕೊಳ್ಳಲು ಸಮಯವೆಂದು ಕೆಲವರು ಭಾವಿಸಬಹುದು. ಜನತೆಯ ಹಿತಕ್ಕಾಗಿ ದುಡಿಯದವರನ್ನೂ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳುವ ಚಾರಿತ್ರ್ಯವಿಹೀನರನ್ನೂ ತಿರಸ್ಕರಿಸುವುದು ಜನರ ಕರ್ತವ್ಯ. ಆದರೆ ಕೇವಲ ಅಸೂಯೆಯಿಂದ ಚಾರಿತ್ರ್ಯವುಳ್ಳ ದೇಶಭಕ್ತರನ್ನು ಸೋಲಿಸಬೇಕೆನ್ನುವ ಹಠ ಒಳ್ಳೆಯದಲ್ಲ. ಸರ್ಕಾರವನ್ನು ನಡೆಸಲು, ಪಕ್ಷದ ನಾಯಕತ್ವ

ವಹಿಸಲು ಪರಿಪಕ್ವ ಅನುಭವವುಳ್ಳ ಮುಂದಾಳುಗಳು ಬೇಕು. ಒಂದು ರಾಜಕೀಯಪಕ್ಷಕ್ಕೆ ಮುಂದಾಳುಗಳಿಲ್ಲದಿದ್ದರೆ ರೈಲನ್ನು ನಡೆಸುವ ಡ್ರೈವರನಿಲ್ಲದಂತೆ. ಇದೇ ರೀತಿ, ವಿರೋಧ ಪಕ್ಷದ ಪ್ರತಿಭಾಶಾಲಿಗಳೂ ಪ್ರಾಮಾಣಿಕ ವ್ಯಕ್ತಿಗಳೂ ಶಾಸನಸಭೆಗೆ ಚುನಾಯಿತರಾಗದಿದ್ದರೆ ಆಡಳಿತವು ಅಂಕುಶವಿಲ್ಲದ ಆನೆಯಂತಾಗ ಬಹುದು. ಆದುದರಿಂದ ಆಳುವ ಪಕ್ಷದ ಮತ್ತು ವಿರೋಧಪಕ್ಷದ ಚಾರಿತ್ರ್ಯವುಳ್ಳ ಮುಂದಾಳುಗಳನ್ನು ಚುನಾಯಿಸುವುದು ಮತ ದಾರರ ಪವಿತ್ರ ಕರ್ತವ್ಯವಾಗಿದೆ. ವಿಧಾನಸಭಾಧ್ಯಕ್ಷರನ್ನೂ, ವಿರೋಧಿಪಕ್ಷದ ನಾಯಕರನ್ನೂ ವಿರೋಧವಿಲ್ಲದೆ ಆರಿಸುವುದೂ ಆವಶ್ಯಕವೆಂದು ಕಾಣುತ್ತದೆ. ಜನರಲ್ಲಿ ವಿಚಾರ ಮಾಡುವ ಶಕ್ತಿ ವಿಕಾಸವಾದಂತೆ ಯೋಗ್ಯ ನಿರ್ಧಾರಮಾಡುವ ಪರಿಪಾಠ ಬೆಳೆ ಯುತ್ತದೆ. ಮನೆಮುರುಕರು ಯಾರು, ಜನಹಿತಚಿಂತಕರು ಯಾರು, ಸ್ವಾರ್ಥಿಗಳು ಯಾರು, ಜನಹಿತಸಾಧಕರು ಯಾರು ಎಂಬ ತಾರತಮ್ಯಜ್ಞಾನ ಅವರಿಗೆ ಬರುತ್ತದೆ. ಆಗ ಅವರು ವಿವೇಕದಿಂದ ಮತವನ್ನು ಹಾಕುತ್ತಾರೆ. ಸಾಧ್ಯವಾದಷ್ಟು ಸ್ವತಂತ್ರ ಉಮೇದುವಾರರ ಬದಲು ಪಕ್ಷದ ಉಮೇದುವಾರರಿಗೆ ಬೆಂಬಲನೀಡುವುದು ಅಗತ್ಯ. ಸ್ವತಂತ್ರರು ಯಾವ ಗೊತ್ತಾದ ಧ್ಯೇಯಗಳಿಗೂ ಪಕ್ಷದ ಹತೋಟಿಗೂ ಒಳಗಾಗಿರುವುದಿಲ್ಲ. ಶಾಸನ ಸಭೆಗೆ ಸ್ವತಂತ್ರರೇ ಹೆಚ್ಚಾಗಿ ಆರಿಸಲ್ಪಟ್ಟರೆ ಯಾವ ಪಕ್ಷವೂ ಸರ್ಕಾರವನ್ನು ರಚಿಸಲಾರದು. ರಾಜ್ಯದಲ್ಲಿ ರಾಜಕೀಯ ಭದ್ರತೆ ಯಿರಲಾರದು. ಹೀಗೆಂದ ಮಾತ್ರಕ್ಕೆ ಅಸಾಧಾರಣ ಸಾಮರ್ಥ್ಯ ವುಳ್ಳ ಸ್ವತಂತ್ರ ಸ್ಪರ್ಧಿಗಳನ್ನು ಚುನಾಯಿಸಬಾರದೆಂದಲ್ಲ. ಪ್ರತಿ ಭಾಶಾಲಿಗಳಾದ ಸ್ವತಂತ್ರರು ಆರಿಸಿ ಬಂದರೆ ಶಾಸನಸಭೆಗೆ ಲಾಭವಾಗುತ್ತದೆ. ಆದರೆ ಭದ್ರವಾದ ಸರ್ಕಾರ ಸ್ಥಾಪನೆಯ

ದೃಷ್ಟಿಯಿಂದ ಉತ್ತಮ ಮುಂದಾಳುಗಳನ್ನೂ ಅಂಗೀಕಾರಾರ್ಹ ಕಾರ್ಯಕ್ರಮವನ್ನೂ ಹೊಂದಿರುವ ರಾಜಕೀಯಪಕ್ಷಗಳಿಗೆ ಬೆಂಬಲ ನೀಡುವುದು ಆವಶ್ಯಕ.

ಪಕ್ಷದ ಉಮೇದುವಾರರಿಗೆ ಎಲ್ಲಾ ಅರ್ಹತೆಗಳೂ ಇರದಿರಬಹುದು. ಎಲ್ಲರೂ ವಿದ್ಯಾವಂತರಾಗದಿರಬಹುದು. ಎಲ್ಲರಿಗೂ ಅನುಭವವಿರದಿರಬಹುದು. ಎಲ್ಲರಿಗೂ ದಕ್ಷತೆ ಇರದಿರಬಹುದು. ಸೇವಾ ಮನೋಭಾವ ಮತ್ತು ಪ್ರಾಮಾಣಿಕತೆಗಳಿರುವ ವ್ಯಕ್ತಿಗಳಿಂದ ಜನಹಿತವಾಗುತ್ತದೆ. ಅಂತಹವರಿಗೆ ಜನರು ಬೆಂಬಲ ನೀಡಬೇಕು. ಅಭಿಪ್ರಾಯಭೇದವಿದ್ದ ಮಾತ್ರಕ್ಕೆ ಒಬ್ಬರನ್ನೊಬ್ಬರು ದ್ವೇಷಿಸುವುದೂ ದೂಷಿಸುವುದೂ ಸಾಧುವಾದುದಲ್ಲ. ಸಹನೆಯೇ ಪ್ರಜಾಪ್ರಭುತ್ವದ ಲಕ್ಷಣ. ಚುನಾವಣಾಟಿಕೇಟುಗಳನ್ನು ಕೊಡುವಾಗ ಪಕ್ಷದ ಮಾಲೀಕರು ಶಾಸನಸಭೆಗಳಿಗೆ ಕೇವಲ "ಹೌದಪ್ಪ" ಗಳನ್ನೂ ದಡ್ಡರನ್ನೂ ತುಂಬಲು ಪ್ರಯತ್ನಿಸದೆ ಯೋಗ್ಯತೆ ಮತ್ತು ಚಾರಿತ್ರ್ಯವುಳ್ಳ ನಿಸ್ಪೃಹ ವ್ಯಕ್ತಿಗಳನ್ನು ಪ್ರೋತ್ಸಾಹಿಸಬೇಕು. ಒಬ್ಬರನ್ನೊಬ್ಬರು ಮುರಿಯುವ ವಿನಾಶಕಾರಿ ನೀತಿಯನ್ನನುಸರಿಸಬಾರದು. ಪಕ್ಷದ ಉಮೇದುವಾರರನ್ನು ಆರಿಸುವ ಬಗ್ಗೆ ಉತ್ತಮ ಸಂಪ್ರದಾಯಗಳನ್ನು ಅನುಸರಿಸಬೇಕು.

ಮತದಾರರು ಪ್ರಾಮಾಣಿಕರಾದವರಿಗೆ ಕುಲ ಪಂಗಡಗಳ ಭೇದವೆಣಿಸದೆ ಬೆಂಬಲ ಕೊಡಬೇಕು. ಜನರ ಹಿತವನ್ನು ನಿಷ್ಠೆಯಿಂದ ಕಾಪಾಡುವ ವ್ಯಕ್ತಿಗೆ ಪುರಸ್ಕಾರ ದೊರೆಯಬೇಕು. ಚುನಾವಣಾ ಕ್ಷೇತ್ರಕ್ಕೆ ಯಾರಿಂದ ಸೇವೆಯಾಗಬೇಕೆಂಬುದನ್ನು ಮನವರಿಕೆ ಮಾಡಿಕೊಂಡು ಜನರು ಮತವನ್ನು ನೀಡಬೇಕಾದುದು ಅಗತ್ಯ. ಸಣ್ಣಪುಟ್ಟ ಆಶೆಗಳಿಗಾಗಿ ಮತದಾರರು ಜನಹಿತವನ್ನು

ಬಲಿ ಕೊಡಬಾರದು. ಚುನಾವಣಾಕ್ಷೇತ್ರದೊಡನೆ ಸಂಪರ್ಕವಿಟ್ಟು ಕೊಂಡು ರಚನಾತ್ಮಕ ಕೆಲಸಮಾಡುವವರಿಗೆ ಜನತೆಯು ಗೌರವ ಕೊಡಬೇಕು. ದೇಶದಲ್ಲಿ ಬಡತನ ಮತ್ತು ನಿರುದ್ಯೋಗಗಳು ಅಧಿಕವಾಗಿದ್ದರೆ ಚುನಾವಣೆಗಳು ಎಷ್ಟೋ ಜನರಿಗೆ ಜೀವನೋಪಾಯವಾಗಬಹುದು. ಆರ್ಥಿಕ ವೈಷಮ್ಯಗಳು ಅಳಿದು ಜನ ಜಾಗೃತಿಯಾದಂತೆ ಚುನಾವಣೆಯ ನೀತಿಯ ಮಟ್ಟ ಹೆಚ್ಚುವುದರಲ್ಲಿ ಅನುಮಾನವಿಲ್ಲ.

ಭಾರತದ ಮತದಾರರು ವಿಶೇಷ ಜವಾಬ್ದಾರಿಯಿಂದ ವರ್ತಿಸಬೇಕಾಗಿದೆ. ಪ್ರಜಾಪ್ರಭುತ್ವದ ಸಸಿಯನ್ನು ನಾವು ಇತ್ತೀಚೆಗೆ ನೆಟ್ಟಿದ್ದೇವೆ. ಅದು ಭದ್ರವಾಗಿ ಬೇರೂರುವ ತನಕ ಎಲ್ಲ ನಾಗರಿಕರೂ ತಮ್ಮ ಕರ್ತವ್ಯಗಳನ್ನು ನಿರ್ವಹಿಸಬೇಕು. ಶೈಶವಾವಸ್ಥೆಯಲ್ಲಿರುವ ಪ್ರಜಾಪ್ರಭುತ್ವ ಬೆಳೆದು ಯಶಸ್ವಿಯಾಗಲು ನಮ್ಮಲ್ಲಿ ರಾಷ್ಟ್ರಾಭಿಮಾನವು ವಿಕಾಸವಾಗಬೇಕು. ರಾಜಕೀಯಪಕ್ಷಗಳು ಒಳ್ಳೆಯ ಸಂಪ್ರದಾಯಗಳನ್ನು ಹಾಕಬೇಕು. ಉಮೇದುವಾರರು ಮತ್ತು ಮತದಾರರು ತಮ್ಮ ಹಕ್ಕು ಮತ್ತು ಕರ್ತವ್ಯಗಳನ್ನು ಅರಿತು ನಿಷ್ಪಕ್ಷಪಾತ ಚುನಾವಣೆಗಳು ನಡೆಯುವಂತೆ ಸಹಕರಿಸಬೇಕು. ಮತದ ಹಕ್ಕು ಮಹಾಜನಗಳ ಕೈಯಲ್ಲಿರುವ ಮಹಾ ಅಸ್ತ್ರ. ಅದನ್ನು ಸರಿಯಾಗಿ ವಿನಿಯೋಗಿಸಿದರೆ ನಾಡಿನ ಕಲ್ಯಾಣವಾಗುವುದು ; ಇಲ್ಲದಿದ್ದರೆ ವಿನಾಶವಾಗುವುದು. ನಾಡಿನ ಭವಿಷ್ಯವನ್ನು ರೂಪಿಸಿಕೊಳ್ಳುವ ಹಕ್ಕು ಮತದಾರರ ಕೈಯಲ್ಲಿಯೇ ಇದೆ.

---

## ೯

# ಕೆಲವು ಸಮಸ್ಯೆಗಳು

ಚುನಾವಣೆಗಳು ನಮ್ಮ ಗುರಿಯಲ್ಲ; ಸಾಧನ ಮಾತ್ರ. ಸಂಸ್ಥೆಗಳನ್ನು ಚುನಾವಣೆಗಳ ಮೂಲಕ ರಚಿಸಿಕೊಂಡು ಸಾರ್ವಜನಿಕ ಹಿತಸಾಧನೆಗಾಗಿ ಚುನಾಯಿತರಾದವರು ಶ್ರಮಿಸಬೇಕು. ಈ ಗುರಿಯನ್ನು ಸಾಧಿಸಲು ಯಾವ ರೀತಿಯ ಚುನಾವಣಾ ಪದ್ಧತಿಯು ಸಹಾಯಕವಾದೀತು ಎಂಬುದು ಗಹನವಾದ ಸಮಸ್ಯೆ. ಚುನಾವಣೆಗಳಲ್ಲಿ ನೇರವಾದ ಮತ್ತು ಪರೋಕ್ಷವಾದ ಚುನಾವಣೆ ಎಂದು ಎರಡು ವಿಧ. ನೇರವಾದ ಚುನಾವಣೆಯಲ್ಲಿ ಮತದಾರರು ನೇರವಾಗಿ ತಮ್ಮ ಪ್ರತಿನಿಧಿಗಳನ್ನು ಚುನಾಯಿಸುತ್ತಾರೆ. ಚುನಾಯಿತ ಪ್ರತಿನಿಧಿಗಳು ಸೇರಿ ಮತ್ತೊಬ್ಬರನ್ನು ಪುನಃ ಚುನಾಯಿಸಿದರೆ ಅದು ಪರೋಕ್ಷ ಚುನಾವಣೆಯಾಗುತ್ತದೆ. ನೇರವಾದ ಚುನಾವಣೆಗಳು ಜನಪ್ರಿಯವಾಗಿವೆ. ಭಾರತದಲ್ಲಿ ಶಾಸನಸಭೆಗಳಿಗ ನೇರವಾದ ಚುನಾವಣೆಯಿದೆ. ರಾಷ್ಟ್ರಪತಿಯನ್ನು ಪರೋಕ್ಷ ಚುನಾವಣೆಯ ಮೂಲಕ ಆರಿಸಲಾಗುತ್ತದೆ. ಈ ಎರಡು ಪದ್ಧತಿಗಳು ಎಲ್ಲ ದೇಶಗಳಲ್ಲಿ ಆಚರಣೆಯಲ್ಲಿವೆ.

### ಮತದ ಹಕ್ಕು ಯಾರಿಗೆ ?

ಚುನಾವಣೆಯ ತತ್ತ್ವಗಳನ್ನು ವಿವೇಚಿಸುವಾಗ ಎದುರಾಗುವ ಒಂದು ಸಮಸ್ಯೆ ಎಂದರೆ ಮತದ ಹಕ್ಕನ್ನು ಎಲ್ಲರಿಗೂ ಕೊಡಬೇಕೇ ಎಂಬುದು. ಬ್ರಿಟನ್ನಿನಲ್ಲಿ ಮೊದಲಿನಿಂದಲೂ ವಯಸ್ಕಮತದಾರಿಕೆ ಇರಲಿಲ್ಲ. ಓದುಬಲ್ಲವರಿಗೆ, ಆಸ್ತಿಯುಳ್ಳವರಿಗೆ ಮಾತ್ರ ಮೊದಲು ಮತದ ಹಕ್ಕಿತ್ತು. ಆದರೆ ಇಂದು

ಪ್ರಪಂಚದ ಮುಖ್ಯ ಪ್ರಜಾಪ್ರಭುತ್ವ ದೇಶಗಳಲ್ಲೆಲ್ಲಾ ವಯಸ್ಕರ ಮತದಾರಿಕೆಯು ಆಚರಣೆಗೆ ಬಂದಿದೆ. ಕ್ರಮೇಣವಾಗಿ ಅನೇಕ ದೇಶಗಳೂ ವಯಸ್ಕಮತತತ್ತ್ವವನ್ನು ಅಂಗೀಕರಿಸಿವೆ.

ಆದರೆ ವಯಸ್ಕರ ಹಕ್ಕನ್ನು ಆಚರಣೆಗೆ ತರದ ದೇಶಗಳೂ ಇವೆ. ಸ್ವಿಟ್ಜರ್ಲೆಂಡಿನಲ್ಲಿ ಮಹಿಳೆಯರಿಗೆ ಮೊನ್ನೆಯವರೆಗೂ ಮತದ ಹಕ್ಕೇ ಇರಲಿಲ್ಲ. ಬ್ರಿಟನ್ನಿನಲ್ಲಿ ಕೂಡ ಅನೇಕ ವರ್ಷಗಳ ಚಳುವಳಿಯ ತರುವಾಯ ಮಹಿಳೆಯರಿಗೆ ಮತ ಕೊಡುವ ಹಕ್ಕನ್ನು ನೀಡಲಾಯಿತು. ಆದರೆ ಭಾರತದಲ್ಲಿ ವಯಸ್ಕರಿಗೆಲ್ಲರಿಗೂ ಒಂದೇ ಬಾರಿಗೆ ಮತದ ಹಕ್ಕನ್ನು ಕೊಟ್ಟಿರುವುದು ಸರಿಯೇ ಎಂದು ಕೆಲವರು ಟೀಕಿಸುತ್ತಾರೆ. ಪರದೇಶಗಳಲ್ಲಿ ಜನಸಂಖ್ಯೆ ಕಡಿಮೆ ಮತ್ತು ವಿದ್ಯಾವಂತರು ಜಾಸ್ತಿ. ನಮ್ಮ ದೇಶದಲ್ಲಾದರೋ ಅಧಿಕ ಜನಸಂಖ್ಯೆ. ಇವರಲ್ಲಿ ಬಹುಸಂಖ್ಯಾತರು ಅವಿದ್ಯಾವಂತರು. ಇವರೆಲ್ಲರಿಗೂ ಮತದ ಹಕ್ಕನ್ನು ಕೊಟ್ಟಿರುವುದು ಪ್ರಜಾಪ್ರಭುತ್ವದ ಯಶಸ್ಸಿಗೆ ಸಹಾಯಕವಾಗಬಲ್ಲುದೇ ಎಂದು ಪ್ರಶ್ನಿಸಲಾಗಿದೆ.

ಈಗಾಗಲೇ ನಾವು ಇಟ್ಟಿರುವ ಹೆಜ್ಜೆಯನ್ನು ಹಿಂದಕ್ಕೆ ಹಾಕಲು ಸಾಧ್ಯವೇ ಎಂದು ಕೆಲವರು ವಾದಮಾಡುತ್ತಾರೆ. ಪ್ರಾಪ್ತವಯಸ್ಕರಿಗೆಲ್ಲರಿಗೂ ಮತದ ಹಕ್ಕನ್ನು ಕೊಡುವ ಬದಲು ಮೊದಲು ಮನೆಯ ಯಜಮಾನರಿಗೆ ಮಾತ್ರ ಓಟಿನ ಹಕ್ಕನ್ನು ಕೊಟ್ಟು ಕ್ರಮೇಣವಾಗಿ ಇದನ್ನು ವಿಸ್ತರಿಸುತ್ತಾ ಹೋಗಿದ್ದರೆ ಚೆನ್ನಾಗಿರುತ್ತಿತ್ತು. ಈಗ ಕೊಟ್ಟಿರುವ ಹಕ್ಕನ್ನು ಕಿತ್ತುಕೊಳ್ಳುವುದು ಕಷ್ಟ. ಪ್ರಾಪ್ತವಯಸ್ಕರು ತಮ್ಮ ಹಕ್ಕನ್ನು ಸರಿಯಾಗಿ ಉಪಯೋಗಿಸದೆ ಇರಬಹುದು. ನಿಸ್ಪೃಹರಾದವರಿಗೆ ಬೆಂಬಲ ನೀಡದೆ ಕೆಲವುವೇಳೆ ಯೋಗ್ಯತೆಯಿಲ್ಲದವರು ಚುನಾಯಿತರಾಗ

ಬಹುದು. ಅವಿದ್ಯೆ, ಅಜ್ಞಾನ ಮೊದಲಾದವುಗಳಿಂದ ಕೂಡಿರುವ ಜನ ಯೋಗ್ಯ ಉಮೇದುವಾರರನ್ನು ಚುನಾಯಿಸದಿರಬಹುದು. ಆದರೆ ಕಾಲಕ್ರಮೇಣದಲ್ಲಿ ಜನತೆ ಎಚ್ಚೆತ್ತುಕೊಳ್ಳುತ್ತಾರೆ. ಜನರು ಎಚ್ಚೆತ್ತಂತೆ ಉಮೇದುವಾರರ ಮಟ್ಟವೂ ಸುಧಾರಿಸು ವುದರಲ್ಲಿ ಅನುಮಾನವಿಲ್ಲ. ಚುನಾವಣೆಯಲ್ಲಿ ಗೆದ್ದವರೆಲ್ಲರೂ ಯೋಗ್ಯರು, ಸೋತವರು ಯೋಗ್ಯತೆಯಿಲ್ಲದವರು ಎಂದು ಭಾವಿಸಬೇಕಾಗಿಲ್ಲ. ಒಮ್ಮೊಮ್ಮೆ ಗುಣವಂತರು ಪರಾಜಿತ ರಾಗಬಹುದು. ಮತದಾರರು ಹಣ ಮೊದಲಾದ ಕೀಳು ಪ್ರಭಾವಕ್ಕೆ ಒಳಗಾಗದಂತೆ ವರ್ತಿಸುವುದು ಬಹಳ ಮುಖ್ಯ ವಾದದ್ದು. ರಾಜಕೀಯ ಪಕ್ಷಗಳೂ, ಸಾರ್ವಜನಿಕರೂ ಈ ವಿಷಯದಲ್ಲಿ ಜಾಗರೂಕತೆ ವಹಿಸಿ ರಾಜಕೀಯ ಶಿಕ್ಷಣವನ್ನು ಕೊಟ್ಟು ಚುನಾವಣೆಯ ಮಟ್ಟವನ್ನು ಎತ್ತಿಹಿಡಿಯಬೇಕು.

## ಕಡ್ಡಾಯದ ಮತದಾನ

ಮತ ಕೊಡುವುದನ್ನು ಕಡ್ಡಾಯ ಮಾಡಬೇಕೇ ಎಂಬುದು ಇನ್ನೊಂದು ಸಮಸ್ಯೆ. ಸ್ವಾತಂತ್ರ್ಯಪೂರ್ವದಲ್ಲಿ ಚುನಾವಣೆ ಗಳಿಗೆ ಬಹಿಷ್ಕಾರ ಹಾಕಲಾಗುತ್ತಿತ್ತು. ಈ ರೀತಿಯ ಸಾಮೂಹಿಕ ಬಹಿಷ್ಕಾರಗಳು ಒಳ್ಳೆಯವಲ್ಲ. ಆದರೆ ಚುನಾವಣೆಕಾಲದಲ್ಲಿ ಮತ ಹಾಕದವರಿಗೆ ಶಿಕ್ಷೆ ವಿಧಿಸಬೇಕೇ ಎಂಬುದು ವಿವಾದಾಸ್ಪದ ವಿಷಯ. ಮತಹಾಕುವುದು ಪ್ರಜಾಧರ್ಮ. ಇದನ್ನು ಕಾನೂನು ಮೂಲಕ ಒತ್ತಾಯಪಡಿಸುವುದು ಸಾಧುವಾದುದಲ್ಲ. ಅದು ಜನರ ನೈತಿಕ ಕರ್ತವ್ಯ. ಮತದಾನವನ್ನು ಕಡ್ಡಾಯದ ಕರ್ತವ್ಯ ವನ್ನಾಗಿ ಮಾಡುವುದು ಅನಾವಶ್ಯಕ. ಕೆಲವು ದೇಶಗಳಲ್ಲಿ ಕಡ್ಡಾ ಯದ ಮತದಾರಿಕೆಯನ್ನು ಆಚರಣೆಗೆ ತರಲಾಯಿತು. ಆದರೆ ಈ

ಕ್ರಮವನ್ನು ಬಹು ಜನರು ಅನುಮೋದಿಸುವುದಿಲ್ಲ. ಭಾರತದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಅಧಿಕಸಂಖ್ಯೆಯಲ್ಲಿ ಜನರು ಮತ ದಾನ ಮಾಡುತ್ತಾರೆ. ಪಟ್ಟಣ ಮತ್ತು ನಗರಗಳಲ್ಲಿ ಅಷ್ಟು ಉತ್ಸಾಹವಿರುವುದಿಲ್ಲ. ಹೆಚ್ಚು ಮತದಾರರು ಮತ ಚಲಾಯಿಸು ವಂತೆ ಮಾಡುವುದು ಉಮೇದುವಾರರನ್ನೂ ರಾಜಕೀಯ ಪಕ್ಷ ಗಳನ್ನೂ ಅವಲಂಬಿಸಿದೆ.

### ಒಬ್ಬರಿಗೆ ಒಂದಕ್ಕಿಂತ ಹೆಚ್ಚು ಮತಗಳಿರಬೇಕೇ ?

ಇದು ಸಹಾ ವಿವಾದಾಸ್ಪದ ವಿಷಯ. ಸಾಮಾನ್ಯವಾಗಿ ವಿದ್ಯಾವಂತರಿಗೆ ಮತ್ತು ಇತರ ಕೆಲವು ವರ್ಗಗಳಿಗೆ ವಿಶೇಷ ಚುನಾವಣಾ ಕ್ಷೇತ್ರಗಳನ್ನೇರ್ಪಡಿಸಿ ಅವರಿಗೆ ವಿಶೇಷ ಮತಗಳ ಸೌಕರ್ಯವನ್ನೇರ್ಪಡಿಸುವುದುಂಟು. ನಮ್ಮ ದೇಶದಲ್ಲಿಯೇ ಅಸೆಂಬ್ಲಿ ಮತ್ತು ಪಾರ್ಲಿಮೆಂಟಿಗೆ ಮತಕೊಡುವ ಮತದಾರನು ಪದವೀಧರನಾಗಿ ಉಪಾಧ್ಯಾಯವೃತ್ತಿಯಲ್ಲಿದ್ದರೆ ಆತನು ಅನೇಕ ಮತಗಳನ್ನು ಚಲಾಯಿಸಬಹುದು. ಪದವೀಧರರ ಕ್ಷೇತ್ರದಲ್ಲಿ ಒಂದು ಮತವನ್ನೂ ಉಪಾಧ್ಯಾಯರ ಕ್ಷೇತ್ರದಲ್ಲಿ ಇನ್ನೊಂದು ಮತವನ್ನೂ ಚಲಾಯಿಸಬಹುದು. ವಿಧಾನಪರಿಷತ್ತಿಗೆ ನಿಂತ ಸ್ಪರ್ಧಿಗಳಿಗೆ ಮತವನ್ನು ಕೊಡಬಹುದು. ಈ ಪದ್ಧತಿಯು ವಿದ್ಯಾವಂತರಿಗೆ ಮತ್ತು ಇತರ ಕೆಲವು ವರ್ಗದವರ ಅಭಿಪ್ರಾಯಕ್ಕೆ ಮನ್ನಣೆ ನೀಡುತ್ತದೆ. ಪ್ರಾಪ್ತ ವಯಸ್ಕರೆಲ್ಲರೂ ವಿವೇಕದಿಂದ ಮತ ಚಲಾಯಿಸುತ್ತಾರೆಂಬ ಭರವಸೆಯಿಲ್ಲ. ಆದುದರಿಂದ ಸುಶಿಕ್ಷಿತರ ಅಥವಾ ಕೆಲವು ವೃತ್ತಿಯವರ ಮಾತಿಗೆ ಬೆಲೆಕೊಡಲು ಈ ಪದ್ಧತಿಯು ಸಹಾಯಕವಾಗಿದೆ. ಆದರೆ ಇಲ್ಲಿ ತಾರತಮ್ಯ ಮಾಡಿ ಕೆಲವರಿಗೆ ಮಾತ್ರ ವಿಶೇಷ ಮನ್ನಣೆಕೊಟ್ಟಂತಾಗುವು

ದಿಲ್ಲವೇ ಎಂಬ ಆಕ್ಷೇಪಣೆ ಮಾಡಲಾಗುತ್ತಿದೆ. ಅಲ್ಲದೆ ವಿದ್ಯಾವಂತರೂ ಮತವನ್ನು ವಿವೇಕಯುತವಾಗಿ ಚಲಾಯಿಸುತ್ತಾರೆಂಬ ಭರವಸೆ ಏನು ಎಂದು ಕೇಳಲಾಗುತ್ತಿದೆ. ಆದ್ದರಿಂದ ಯಾರಿಗೂ ಹೆಚ್ಚಿನ ಮತಗಳಿರಕೂಡದು ಎಂದು ವಾದಮಾಡುವವರಿದ್ದಾರೆ. ಈ ವಾದದಲ್ಲಿ ಸತ್ವವಿರುವುದಾದರೂ ರಾಜ್ಯಗಳಲ್ಲಿ ದ್ವಿತೀಯ ಸದನವೇರ್ಪಟ್ಟಿರುವುದರಿಂದ ಅದರ ರಚನೆಯ ಕ್ರಮವನ್ನು ಪ್ರಶ್ನಿಸಿದಂತಾಗುತ್ತದೆ. ಉಪಾಧ್ಯಾಯರಿಗೆ, ಪದವೀಧರರಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಮಾತ್ರ ವಿಶೇಷ ಪ್ರಾತಿನಿಧ್ಯವೇಕೆ? ವರ್ತಕರಿಗೆ, ವಕೀಲರಿಗೆ, ಇತರ ವೃತ್ತಿಯವರಿಗೆ ಏಕೆ ಇದೇ ಸೌಲಭ್ಯವನ್ನು ಕಲ್ಪಿಸಕೂಡದು ಎಂದು ಕೇಳಬಹುದು. ದ್ವಿತೀಯಸದನ ಆವಶ್ಯಕವೇ ಎಂಬ ಪ್ರಶ್ನೆಯೂ ಇದೆ. ಈ ಮೂಲ ಪ್ರಶ್ನೆಯನ್ನು ಬಗೆಹರಿಸುವುದನ್ನವಲಂಬಿಸಿದೆ ವಿಶೇಷ ಮತಗಳನ್ನು ಕೊಡುವ ವಿಷಯ. ದ್ವಿತೀಯ ಸದನವಿರುವುದು ಸೂಕ್ತವೆಂದು ಒಪ್ಪುವುದಾದರೆ, ಕೆಲವು ವರ್ಗಗಳಿಗೆ ಅನೇಕ ಮತಗಳನ್ನು ಕೊಡಬೇಕಾಗುತ್ತದೆ. ಆದರೆ ಆಯಾ ಚುನಾವಣಾ ಕ್ಷೇತ್ರಗಳಲ್ಲಿ ಬೇರೆಯವರು ಉಮೇದುವಾರರಾಗದಂತೆ ಎಚ್ಚರಿಕೆ ವಹಿಸುವುದು ಅಗತ್ಯ. ಉದಾಹರಣೆಗೆ, ಉಪಾಧ್ಯಾಯ ಕ್ಷೇತ್ರದಿಂದ ಉಪಾಧ್ಯಾಯೇತರರು ಚುನಾಯಿತರಾಗುವುದಾದರೆ ಉಪಾಧ್ಯಾಯರ ಹಿತವನ್ನು ಪ್ರತಿನಿಧಿಸುವ ಭರವಸೆ ಎಲ್ಲಿದೆ?

## ಸೋತವರು ಮಂತ್ರಿಗಳಾಗಬಹುದೇ?

ಚುನಾವಣೆಗೆ ಸಂಬಂಧಿಸಿದಂತೆ ಅನೇಕ ಜಟಿಲವಾದ ಸಮಸ್ಯೆಗಳಿವೆ. ಅವುಗಳೆಲ್ಲವನ್ನೂ ಇಲ್ಲಿ ಪ್ರಸ್ತಾಪಿಸುವುದು ಶಕ್ಯವಿಲ್ಲ. ಆದರೆ ಕೊನೆಯದಾಗಿ ಇನ್ನೊಂದೆರಡು ವಿಷಯಗಳನ್ನು ಕುರಿತು

ನಾಲ್ಕು ಮಾತುಗಳನ್ನು ಹೇಳಬಯಸುತ್ತೇನೆ. ಚುನಾವಣೆಯಲ್ಲಿ ಪಕ್ಷದ ನಾಯಕನಾಗಬೇಕಾದವನು ಅನಿರೀಕ್ಷಿತವಾಗಿ ಸೋತರೆ ಸೋತ ವ್ಯಕ್ತಿಯು ಮರುಚುನಾವಣೆಗೆ ನಿಂತುಕೊಳ್ಳಲು ಅವಕಾಶ ವಿರಬೇಕೇ? ಈ ವಿಷಯದಲ್ಲಿ ಸಂವಿಧಾನವು ಏನನ್ನೂ ಹೇಳಿಲ್ಲ. ಇದು ಆಳುವ ಪಕ್ಷದವರು ನಿರ್ಧರಿಸಬೇಕಾದ ವಿಷಯ. ಯಾವ ಸಂಪ್ರದಾಯವನ್ನಾದರೂ ಆಚರಣೆಗೆ ತರಲು ಅವಕಾಶವಿದೆ. ಪ್ರಜಾಪ್ರಭುತ್ವದಲ್ಲಿ ಯಾವ ಸಂಪ್ರದಾಯ ಭೂಷಣಪ್ರದ ವಾಗಿರುತ್ತದೆಯೋ ಅದನ್ನು ರೂಢಿಗೆ ತರಬಹುದು. ೧೯೫೧-೫೨ರ ಮಹಾಚುನಾವಣೆಯಲ್ಲಿ ಮುಂಬೈರಾಜ್ಯದ ಮುಖ್ಯಮಂತ್ರಿ ಶ್ರೀ ಮೊರಾರ್ಜಿದೇಸಾಯಿಯವರು ಸೋತಾಗ ಇಂತಹ ಸಮಸ್ಯೆ ಉದ್ಭವವಾಯಿತು. ಕಾಂಗ್ರೆಸ್ ಪಕ್ಷವು ಶ್ರೀ ದೇಸಾಯಿಯವ ರನ್ನು ಮತ್ತೆ ಚುನಾವಣೆಗೆ ನಿಲ್ಲಿಸಿ ಅವರನ್ನು ಆರಿಸಿ ತಂದಿತು. ಆದರೆ ಇದು ಪ್ರಜಾಪ್ರಭುತ್ವ ಸಂಪ್ರದಾಯಕ್ಕೆ ಭೂಷಣವಲ್ಲ ವೆಂದು ಕೆಲವರು ಟೀಕಿಸಿದರು. ಒಮ್ಮೆ ಸೋತವರನ್ನೇ ಮುಖ್ಯ ಮಂತ್ರಿಯನ್ನಾಗಿ ಮಾಡುವುದಾದರೂ ಏಕೆ? ಇತರ ಚುನಾಯಿತ ವ್ಯಕ್ತಿಗಳನ್ನು ನಾಯಕರನ್ನಾಗಿ ಆರಿಸಿಕೊಳ್ಳಬಹುದು ಎಂದು ವಾದಿಸುವವರಿದ್ದಾರೆ. ಸಾಧಾರಣವಾಗಿ ಸೋತವರನ್ನು ತಕ್ಷಣವೇ ಮರುಚುನಾವಣೆಗೆ ನಿಲ್ಲಿಸುವುದು ಅಷ್ಟು ಚೆನ್ನಾಗಿ ಕಾಣುವುದಿಲ್ಲ. ದೇಶದ ಐಕ್ಯತೆ ಮತ್ತು ಸರ್ಕಾರ ರಚನೆಯ ಅನಿವಾರ್ಯ ಕಾರಣ ಗಳಿದ್ದರೆ ಮಾತ್ರ ಅಪವಾದಾತ್ಮಕವಾಗಿ ಪರಾಜಿತರಾದವರನ್ನು ಅಧಿಕಾರದಲ್ಲಿ ಮುಂದುವರೆಸಿ, ಮರುಚುನಾವಣೆಗೆ ನಿಲ್ಲಲು ಅವಕಾಶ ಕೊಡಬಹುದು. ಇದು ಒಂದು ದೇಶದ ಪ್ರಜಾ ಪ್ರಭುತ್ವದ ಕಾರ್ಯ ಪದ್ಧತಿಗೆ ಸಂಬಂಧಿಸಿದೆ. ಆಯಾ ದೇಶದ ಸನ್ನಿವೇಶ ಮತ್ತು ಸ್ಥಿತಿಗತಿಗಳನ್ನು ಗಮನಿಸಿ ಸಂಪ್ರದಾಯ

ವನ್ನು ಬೆಳೆಸಿಕೊಳ್ಳಬೇಕು.

## ಚುನಾವಣೆಗೆ ಮುಂಚೆ ಸರ್ಕಾರ ರಾಜಿನಾಮೆ ಕೊಡಬಾರದೇಕೆ?

ಚುನಾವಣೆಗೆ ಸಂಬಂಧಿಸಿದ ಇನ್ನೊಂದು ಪ್ರಮುಖ ವಿಷಯ ಚುನಾವಣೆಗೆ ಮುನ್ನ ಅಧಿಕಾರದಲ್ಲಿರುವ ಮಂತ್ರಿಗಳು ರಾಜಿನಾಮೆ ಕೊಡಬಾರದೇಕೆ ಎಂಬುದು. ಚುನಾವಣೆಗಳು ನಿಷ್ಪಕ್ಷಪಾತವಾಗಿ ನಡೆಯಬೇಕಾದರೆ ಅಧಿಕಾರದಲ್ಲಿರುವ ಮಂತ್ರಿಗಳು ಅಧಿಕಾರತ್ಯಾಗಮಾಡಿ ಇತರ ಸಾಮಾನ್ಯರಂತೆಯೇ ಚುನಾವಣೆಗೆ ಇಳಿಯಬೇಕೆಂದು ಒಂದು ಅಭಿಪ್ರಾಯವಿದೆ. ಅಧಿಕಾರದಲ್ಲಿರುವವರು ಸರ್ಕಾರೀ ಪ್ರಭಾವ ಬೀರಬಹುದೆಂಬುದೇ ಈ ಸಲಹೆಗೆ ಕಾರಣವಾಗಿದೆ. ಮಂತ್ರಿಗಳು ತಮ್ಮ ಸ್ಥಾನವನ್ನು ಉಪಯೋಗಿಸಿ ಚುನಾವಣೆಯಲ್ಲಿ ಗೆಲ್ಲುತ್ತಾರೆ ಎಂಬ ಆಕ್ಷೇಪಣೆ ನಿರಾಧಾರವಾದುದೆಂದು ಅಲ್ಲಗಳೆಯುವುದು ಕಷ್ಟ. ಆದರೆ ಮಂತ್ರಿಯಾಗಿ ಸ್ಪರ್ಧಿಸಿದ ಅನೇಕರು ಸೋತ ಉದಾಹರಣೆಗಳು ಹೇರಳವಾಗಿವೆ ಎಂಬುದನ್ನೂ ನಾವು ಮರೆಯಕೂಡದು.

ಭಾರತದಲ್ಲಿ ಆಧುನಿಕ ಪ್ರಜಾಪ್ರಭುತ್ವದ ಪ್ರಯೋಗ ಕೇವಲ ಇತ್ತೀಚಿನದು. ನಾವು ಅನೇಕ ಸಂಪ್ರದಾಯಗಳನ್ನು ಬೆಳೆಸಿಕೊಳ್ಳಬೇಕು. ಇಂಗ್ಲೆಂಡಿನಲ್ಲಿರುವ ಒಳ್ಳೆಯ ಸಂಪ್ರದಾಯಗಳನ್ನು ರೂಢಿಸಿಕೊಳ್ಳಬೇಕು. ಆದರೆ ಭಾರತದ ವಿಶಿಷ್ಟಪರಿಸ್ಥಿತಿಗಳನ್ನು ಗಮನಿಸಿ ಸೂಕ್ತ ತಿದ್ದುಪಡಿಗಳನ್ನು ಮಾಡಿಕೊಳ್ಳಬೇಕು. ಲಂಡನ್ನಿನಲ್ಲಿ ಮಳೆ ಬಂದರೆ ಬೊಂಬಾಯಿನಲ್ಲಿ ಕೊಡೆ ಹಿಡಿಯುವ ಅಂಧಾನುಕರಣವೂ ತಕ್ಕುದಲ್ಲ. ಈ ದೃಷ್ಟಿಯಿಂದ ನೋಡಿದರೆ ಚುನಾವಣೆಯ ಪೂರ್ವದಲ್ಲಿ ಮಂತ್ರಿಮಂಡಲಗಳು ಅಧಿಕಾರ

ತ್ಯಾಗಮಾಡುವ ಹೊಸ ಸಂಪ್ರದಾಯವನ್ನು ಭಾರತದಲ್ಲಿ ಆರಂಭಿಸುವುದು ಉಚಿತವೆಂದು ಕಾಣುತ್ತದೆ- ಇಂಗ್ಲೆಂಡಿನಲ್ಲಿ ಮತ್ತು ಇತರ ಯಾವ ದೇಶದಲ್ಲೂ ಈ ಪದ್ಧತಿಯಿಲ್ಲವೆಂದು ಹೇಳಬಹುದು. ಅಂತಹವರು ಇಂಗ್ಲೆಂಡಿನ ಮತ್ತು ಭಾರತಗಳಲ್ಲಿನ ರಾಜಕೀಯ ನೀತಿಯ ಮಟ್ಟ ಒಂದೇ ಆಗಿರದೆ ಬಹಳ ವ್ಯತ್ಯಾಸಗಳಿವೆ ಎಂಬುದನ್ನು ನೆನಪಿನಲ್ಲಿಡಬೇಕು. ಆದುದರಿಂದ ಚುನಾವಣಾಪೂರ್ವದಲ್ಲಿ ಮಂತ್ರಿ ಮಂಡಲಗಳು ರಾಜಿನಾಮೆ ಕೊಡುವ ಒಳ್ಳೆಯ ಸಂಪ್ರದಾಯವನ್ನು ಭಾರತವು ಆಚರಣೆಗೆ ತರಬಹುದಾಗಿದೆ. ನಮ್ಮ ದೇಶದ ಸನ್ನಿವೇಶವನ್ನು ಗಮನಿಸಿ ಇಂತಹ ಕೆಲವು ವಿನೂತನ ಸಂಪ್ರದಾಯಗಳನ್ನು ನಾವು ಬೆಳೆಸಿಕೊಂಡರೆ ಅದರಲ್ಲಿ ತಪ್ಪೇನಿಲ್ಲವೆಂದೆನಿಸುತ್ತದೆ.

---

## ಅನುಬಂಧ—೧

ವಿಧಾನ ಸಭೆಗೆ ನಡೆದ ಎರಡು ಮಹಾಚುನಾವಣೆಗಳಲ್ಲಿ ವಿವಿಧ ಪಕ್ಷಗಳು ಪಡೆದ ಜನಬೆಂಬಲವನ್ನು ತೋರಿಸುವ ಪಟ್ಟಿ.

| ಪಕ್ಷಗಳು | ೧೯೫೧ರಲ್ಲಿ ಗಳಿಸಿದ ಜನಬೆಂಬಲ (ಶೇಕಡ) | ೧೯೫೭ರಲ್ಲಿ ಗಳಿಸಿದ ಜನಬೆಂಬಲ (ಶೇಕಡ) |
|---|---|---|
| ಕಾಂಗ್ರೆಸ್ .... | ೪೨.೧೫ | ೪೪.೯೨ |
| ಕಮ್ಯೂನಿಸ್ಟ್ .... | ೪.೪೦ | ೧೦.೫೨ |
| ಪಿ. ಎಸ್. ಪಿ. ... | ೧೪.೮೫ | ೯.೬೩ |
| ಜನಸಂಘ .... | ೨.೭೦ | ೩.೬೩ |
| ಇತರರು ... | ೩೫.೯೦ | ೩೧.೩೦ |
| ಒಟ್ಟು... | ೧೦೦ | ೧೦೦ |

## ಅನುಬಂಧ—೨

ಲೋಕಸಭೆಗೆ ನಡೆದ ಎರಡು ಮಹಾಚುನಾವಣೆಗಳಲ್ಲಿ ವಿವಿಧ ಪಕ್ಷಗಳು ಪಡೆದ ಜನಬೆಂಬಲವನ್ನು ತೋರಿಸುವ ಪಟ್ಟಿ.

| ಪಕ್ಷಗಳು | ೧೯೫೧ರಲ್ಲಿ ಗಳಿಸಿದ ಜನಬೆಂಬಲ (ಶೇಕಡ) | ೧೯೫೭ರಲ್ಲಿ ಗಳಿಸಿದ ಜನಬೆಂಬಲ (ಶೇಕಡ) |
|---|---|---|
| ಕಾಂಗ್ರೆಸ್ ... | ೪೫.೦ | ೪೭.೦ |
| ಪಿ. ಎಸ್. ಪಿ. .... | ೧೬.೪ | ೧೦.೫ |
| ಕಮ್ಯೂನಿಸ್ಟ್ ... | ೫.೦ | ೧೦.೦ |
| ಜನಸಂಘ .... | ೩.೧ | ೬.೦ |
| ಇತರರು ... | ೩೦.೫ | ೨೬.೫ |
| ಒಟ್ಟು... | ೧೦೦ | ೧೦೦ |